# ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು – ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ. ಫಿಲ್. ಪದವಿಗಾಗಿ
(ಅಭಿವೃದ್ಧಿ ಅಧ್ಯಾಯ ಸಾದರ ಪಡಿಸಿದ ಸಂಪ್ರಬಂಧ)

ಸಂಶೋಧಕರು

ಚಂಪಾ ಟಿ. ಡಿ.
ನೋಂದಣಿ ಸಂಖ್ಯೆ: **KTSMDS-00628**

ಮಾರ್ಗದರ್ಶಕರು
ಡಾ.. ವಾಲ್ಟರ್ ಡಿಸೋಜಾ

೨೦೧೩



...ಟಕ ಥಿಯೋಲೊಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫ ೦೦೧

# ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು – ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ. ಫಿಲ್. ಪದವಿಗಾಗಿ
(ಅಭಿವೃದ್ಧಿ ಅಧ್ಯಯನ ಸಾದರ ಪಡಿಸಿದ ಸಂಪ್ರಬಂಧ)

ಸಂಶೋಧಕರು

ಚಂಪಾ ಟಿ. ಡಿ.
ನೋಂದಣಿ ಸಂಖ್ಯೆ: KTSMDS-00628

ಮಾರ್ಗದರ್ಶಕರು
ಡಾ. ವಾಲ್ಟರ್ ಡಿಸೋಜಾ

೨೦೧೩

ಕರ್ನಾಟಕ ತಿಯೋಲೋಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫ ೦೦೧

# ಯೋಗ್ಯತಾ ಪತ್ರ

ಚಂಪಾ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು – ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ. ಫಿಲ್. ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಈ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ.

**ಸಂಶೋಧನಾ ಮಾರ್ಗದರ್ಶಕರು**

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ. ಫಿಲ್. ಪದವಿಗಾಗಿ ಸಾದರಪಡಿಸಿದ **"ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ"** ಎಂಬ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಗಿದ್ದು ವಿಶ್ಲೇಷಣೆ ಮತು ಅಧ್ಯಯನದ ಫಲಶ್ರುತಿಯಾಗಿದೆ. ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ **ಡಾ. ವಾಲ್ಟರ್ ಡಿಸೋಜಾ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವು ಬೇರಾವುದೇ ಪದವಿ, ಡಿಪ್ಲೊಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಚಂಪಾ ಟಿ. ಡಿ.**

ಸಂಶೋಧಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

## ಅಧ್ಯಯನದ ವಿವರಗಳು

## ಕೋಷ್ಟಕಗಳ ಪಟ್ಟಿ

# ಅಧ್ಯಾಯ ೧

## ಅಧ್ಯಯನದ ಸ್ವರೂಪ ಮತ್ತು ಉದ್ದೇಶ

೧.೧ ಪೀಠಿಕೆ

೧.೨ ಸಂಘಟಿತ ಮತ್ತು ಅಸಂಘಟಿತ ವಲಯದ ವಿವರಗಳು

೧.೩ ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು

೧.೪ ಅಧ್ಯಯನದ ಸಮಸ್ಯೀಕರಣ

೧.೫ ಅಧ್ಯಯನದ ಉದ್ದೇಶಗಳು

೧.೬ ಅಧ್ಯಯನದ ಊಹೆಗಳು

೧.೭ ಅಧ್ಯಯನದ ವಿಧಾನಗಳು

೧.೮ ಅಧ್ಯಯನದ ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳು

೧.೧ ಪೀಠಿಕೆ

ಮಾನವನ ಪ್ರಗತಿ ಮತ್ತು ಸಾಧನೆಗಳ ಹಿಂದೆ ಹಾಗೂ ಜೀವನದ ಸತ್ಯ ಪರೀಕ್ಷೆಗಳನ್ನು ಎದುರಿಸಿ ಮುಂದೆ ಸಾಗುವುದರಲ್ಲಿ ಮಹಿಳೆಯ ಸುವ್ಯಕ್ತ ಪಾತ್ರವಿತ್ತೆಂಬುದಕ್ಕೆ ಇತಿಹಾಸದಲ್ಲಿ ಸಾಕಷ್ಟು ಸಾಕ್ಷಿಗಳಿವೆ. ಮಹಿಳೆಯರಿಗೆ ಅವರ ನೌಜ್ಯ ಸ್ಥಾನಮಾನ ಹಾಗೂ ಹಕ್ಕುಗಳು ದೊರೆಯುವಂತಾದರೆ ಮಾನವ ಕುಲದ ಉದ್ಧಾರವಾಗಿ ಉತ್ತಮ ಸಮಾಜ ನಿರ್ಮಾಣ ಸಾಧ್ಯವೆಂದು ಸತ್ಯವನ್ನು ಇದು ಅನಾವರಣಗೊಳಿಸುತ್ತದೆ. ಮಹಿಳೆಯು ದುಡಿಮೆಯ ಕ್ಷೇತ್ರದಲ್ಲಿ ಕಾಣಿಸಿಕೊಳ್ಳುವುದು ಇಪ್ಪತ್ತನೆಯ ಶತಮಾನದ ಅದ್ಭುತವೇನಲ್ಲ. ಚರಿತ್ರೆಯ ಆರಂಭದಿಂದಲೂ ಪುರುಷನೊಂದಿಗೆ ಅವಳು ದುಡಿಯುತ್ತಿದ್ದಾಳೆ. ಆದರೆ ಇಂದು ಅವಳನ್ನು ವಿವಿಧ ವರ್ಗಗಳಲ್ಲಿ, ವಿವಿಧ ಸ್ತರಗಳಲ್ಲಿ ಗುರುತಿಸಬಹುದು ಅಷ್ಟೆ. ದುಡಿಯುವ ಮಹಿಳೆ ಎಂದಾಕ್ಷನ ಆಫೀಸು, ಕಾರ್ಖಾನೆಗಳಿಗೆ ಹೋಗುವ ಮಧ್ಯಮ ವರ್ಗದ ಮಹಿಳೆಯನ್ನು, ಅವಳ ಆಶೋತ್ತರಗಳನ್ನು ಕಣ್ಮುಂದೆ ತಂದುಕೊಳ್ಳುವುದು ಅಪೂರ್ಣ ಚಿತ್ರವಷ್ಟೇ.

ದುಡಿಯುವ ರಂಗ ಪ್ರವೇಶಿಸಿದಂದಿನಿಂದ ನಿವೃತ್ತಿಯವರೆಗೆ ಮಹಿಳೆ ಪುರುಷ ಪ್ರಧಾನ ಸಮಾಜದಲ್ಲಿಯೇ ಬದುಕುತ್ತಿದ್ದಾಳೆ. ಆದುದರಿಂದಲೇ ಪ್ರತಿಯೊಂದು ಹಂತದಲ್ಲಿಯೂ ರಾಜಿಮಾರ್ಗಕ್ಕೆ ಹೋಗುತ್ತಾಳೆ. ತಂದೆ ಅಥವಾ ಗಂಡನ ಮನೋಗತಕ್ಕೆ ಅನುಗುಣವಾದ ವೃತ್ತಿ ಆರಿಸಿಕೊಳ್ಳುವುದು, ಮನೆಗೆಲಸ ಮತ್ತು ಕಛೇರಿ ಕೆಲಸದ ಎರಡು ತುದಿ ಹಿಡಿದು ಸಮತೋಲನ ಮಾಡುವುದು, ಇಷ್ಟರಲ್ಲೇ ಅವಳ ಜೀವನ ಮುಗಿಯುತ್ತದೆ.

ಅನಾದಿ ಕಾಲದಿಂದಲೂ ಮಹಿಳೆ ದುಡಿಯುತ್ತಲೇ ಬಂದಿದ್ದಾಳೆ. ಆದರೆ ಸಾಂಪ್ರದಾಯಿಕ ದುಡಿಮೆಗಿಂತ ಇಂದಿನ ದುಡಿಮೆಯ ವಿಧಾನಗಳು ಭಿನ್ನವಾಗಿವೆ. ಇಂದು ಮಹಿಳೆ ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಳೆ. ಈ ದುಡಿಮೆಯನ್ನರಿತು ದಿವಾನ್ ಅವರು ನಿರ್ವಚಿಸುವುದು ಹೀಗೆ "ದುಡಿಮೆ ಎನ್ನುವುದು ಸಂಪಾದನ ಚಟುವಟಿಕೆಗಳನ್ನೊಳಗೊಂಡದ್ದು, ವರಮಾನ ಸಂಬಂಧಿಯಾದದ್ದು, ವಿನಿಮಯ ಮಹತ್ವ ಪಡೆದಿರುವಂಥದ್ದು, ಮನೆಯಿಂದ ಹೊರಗೆ ನೆಲೆಗೊಂಡಿರುವಂಥದ್ದು, ಸಾರ್ವಜೈಕ ಗುಣದಿಂದ ಕೂಡಿದ್ದು ಗಣನೆಗೆ ಮಾಪನಕ್ಕೆ ನಿಲುಕುವಂಥದ್ದಾಗಿರುವುದು" ಆಗಿದೆ.

ಹೆಣ್ಣಿನ ಮನೆಯ ಒಳಗಿನ ದುಡಿಮೆ ಅಥವಾ ಶ್ರಮ ಇಲ್ಲಿ ಪರಿಗಣಿತವಾಗುವುದಿಲ್ಲ. ಮೊದಲಿನಿಂದಲೂ ಈ ದುಡಿಮೆ ಎಂಬುದನ್ನು ಪುರುಷಶಾಹಿ ನೆಲೆಗಟ್ಟಿನಲ್ಲಿಯೇ ಗುರುತಿಸುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ಸ್ತ್ರೀಯರಿಗೆ ಸಂಬಂಧಿಸಿದ ದುಡಿಮೆ ಜೈವಿಕವಾದುದು,

ಖಾಸಗಿಯಾದುದು ಹಾಗು ಮನೆಯ ನಾಲ್ಕು ಗೋಡೆಗಳ ಒಳಗೆ ಸೀಮಿತತೆಯನ್ನು ಪಡೆದುಕೊಂಡಿರುವಂಥದ್ದು. ಆದರೆ ಪುರುಷನ ಸಂದರ್ಭದಲ್ಲಿ ದುಡಿಮೆ ಸಾಮಾಜಿಕ, ಸಾರ್ವಜನಿಕ ಹಾಗೂ ಮನೆಯ ಹೊರಗೆ ನೆಲೆಗೊಂಡಿರುವಂಥದ್ದು. ಇದು ಸಾಂಪ್ರದಾಯಿಕವಾದ ದೃಷ್ಟಿಕೋನ.

ಆಧುನಿಕ ಯುಗದ ಮಹಿಳೆಯು ದುಡಿಮೆಯಲ್ಲಿ ತೊಡಗಿಕೊಂಡಿದ್ದಾಳೆ. ಇಂತಹ ದುಡಿಮೆಯಲ್ಲಿ ತೊಡಗಿಕೊಳ್ಳಲು ಇರುವ ಕಾರಣಗಳು ಒತ್ತಡಗಳು ಅನೇಕ. ಸಾಮಾಜಿಕ, ಸಾರ್ವಜನಿಕ ಹಾಗೂ ಮನೆಯ ಹೊರಗಿನ ದುಡಿತದಲ್ಲಿ ಹೆಣ್ಣು ತೊಡಗಬೇಕಾದ ಅನಿವಾರ್ಯತೆ ಇಂದು ಹೆಚ್ಚಿನ ಪ್ರಮಾಣದಲ್ಲಿದೆ. ಭಾರತದಲ್ಲಿ ಶೇಕಡಾ ೫೦ರಷ್ಟು ಮಹಿಳೆಯರಿದ್ದಾರೆ. ಅವರು ಆರ್ಥಿಕತೆಗೆ ನೀಡಿರುವ ಕೊಡುಗೆಯು ಪುರುಷರಿಗಿಂತ ಕಡಿಮೆ ಪ್ರಮಾಣರಾಗಿರುತ್ತದೆ. ಯಾಕೆಂದರೆ ಬಹು ಪ್ರಮಾಣದಲ್ಲಿ ಮಹಿಳೆಯರು ಅಸಂಘಟಿತ ವಲಯಲ್ಲಿ ದುಡಿಯುವವರಾಗಿದ್ದಾರೆ ಆದುದರಿಂದ ನಾವು ದೇಶದಲ್ಲಿ ಅಸಮಾನತೆ ಮತ್ತು ವೇತನ ತಾರತಮ್ಯವನ್ನು ಕಾಣಬಹುದು. ವೇತನ ತಾರತಮ್ಯದಲ್ಲಿ ಹಲವಾರು ಕಾರಣಗಳಿವೆ. ಅವುಗಳಲ್ಲಿ ಪ್ರಮುಖ ಕಾರಣಗಳೇನೆಂದರೆ. ಕೌಶಲ್ಯದ ಕೊರತೆ ಮಹಿಳೆಯ ಅಗೋಚರ ದುಡಿಮೆಯ ಸ್ವರೂಪ, ಸಂಘಟನೆಯ ಕೊರತೆಯಾಗಿದೆ. ಅಂದರೆ ಪುರುಷರಿಗೆ ಇರುವ ಸಂಘಟನೆ ಶಕ್ತಿ ಮಹಿಳೆಯರಿಗೆ ಇಲ್ಲ ಶಿಕ್ಷಣದ ಕೊರತೆ ಮತ್ತು ಗ್ರಹಸಂಬಂಧಿ ಕಾರ್ಯಗಳಲ್ಲಿ ತೊಡಗಿರುವವರು ಇತ್ಯಾದಿಗಳಿಂದ ವೇತನದಲ್ಲಿ ತಾರತಮ್ಯವನ್ನು ಕಾಣಬಹುದು.

ಅಸಂಘಟಿತ ವಲಯಗಳಲ್ಲಿ ಪ್ರಮುಖವಾಗಿ ಬೀಡಿ ಕಟ್ಟುವುದು, ಕೃಷಿ ಸಂಬಂಧಿ ಕಾರ್ಯಗಳು, ಗೇರು ಕಾರ್ಖಾನೆಯಲ್ಲಿ, ಅಗರಬತ್ತಿ ಕಾರ್ಖಾನೆಗಳಲ್ಲಿ, ಬಟ್ಟೆ ಅಂಗಡಿಗಳಲ್ಲಿ ಇತ್ಯಾದಿ ಮಹಿಳೆಯರು ಹೆಚ್ಚಾಗಿ ದುಡಿಯುವವರಾಗಿರುತ್ತಾರೆ. ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಒಂದು ಸ್ಥಿತಿಗತಿ ಅವರ ಸಾಮಾಜಿಕ ಆರ್ಥಿಕ ಕೊಡುಗೆ ಮತ್ತು ಸಮಸ್ಯೆಗಳನ್ನು ತಿಳಿಯುವ ಮುನ್ನ ಅಸಂಘಟಿತ ವಲಯವೆಂದರೇನು ಎಂದು ತಿಳಿಯುವುದು ಅತ್ಯಗತ್ಯ.

ಸಾಮಾಜಿಕ ಹಾಗೂ ಸಾರ್ವಜನಿಕವಾದ ಹೊರಗಿನ ದುಡಿಮೆಯಲ್ಲಿ ಪ್ರಮುಖವಾಗಿ ಎರಡು ವಲಯಗಳನ್ನು ಕಾಣುತ್ತೇವೆ. ಸಂಘಟಿತ ವಲಯ ಹಾಗೂ ಅಸಂಘಟಿತ ವಲಯಗಳನ್ನು ಕಾಣುತ್ತೇವೆ.

## ೧.೨ ಸಂಘಟಿತ ಮತ್ತು ಅಸಂಘಟಿತ ವಲಯದ ವಿವರಗಳು

'ಕೆಲಸದ ಭದ್ರತೆ ಇರುವ ಸರಕಾರವು ಕಾರ್ಮಿಕರಿಗಾಗಿ ರೂಪಿಸಿರುವ ಕಾನೂನುಗಳನ್ನು ಪಾಲಿಸುವಂಥ ಸಂಘ ಸಂಸ್ಥೆಗಳಲ್ಲಿನ ದುಡಿಮೆಯನ್ನು ಸಂಘಟಿತ ವಲಯದ ದುಡಿಮೆ ಎನ್ನುತ್ತಾರೆ. ಇಲ್ಲಿ ನೌಕರರ ವೇತನ, ಕೆಲಸದ ಅವಧಿ, ಕೆಲಸದ ವಿಧಾನ, ಇತ್ಯಾದಿಗಳನ್ನು ಸಂಘಟನಾಕಾರರು (ಮಾಲಿಕರು) ಕಾರ್ಮಿಕ ಸಂಘಟನೆಗಳೊಂದಿಗೆ ಚರ್ಚಿಸಿ ನಿರ್ಣಯಿಸುವರು. ಇಲ್ಲಿ ಕಾರ್ಮಿಕರಿಗೆ ಯಾವುದೇ ರೀತಿಯ ಸಮಸ್ಯೆಗಳು ಉಂಟಾದಾಗ ಬೇಕಾದ ಸೌಲಭ್ಯಗಳನ್ನು ಒದಗಿಸುವಲ್ಲಿ ಕ್ರಮ ಕೈಗೊಳ್ಳುವುವು. ಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಿಗೆ ಇರುವ ರಕ್ಷಣೆಯು ಹೆಚ್ಚಾಗಿದ್ದು, ಅವರು ಪಡೆದುಕೊಳ್ಳುವ ಸೌಲಭ್ಯವೂ ಅಧಿಕವಾಗಿದೆ. ಇವರು ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳು ಅಂದರೆ ಫ್ಯಾಕ್ಟರಿ ಕಾಯಿದೆಯ ನಿಯಂತ್ರಣದಲ್ಲಿರುವ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ.

ಉದ್ಯೋಗದ ಭದ್ರತೆಯನ್ನು ಒದಗಿಸುವ ಮತ್ತು ಸೇವಾ ನಿಯಮಗಳನ್ನು ಪಾಲಿಸುವ ಸಲುವಾಗಿ ಸರಕಾರ ರೂಪಿಸಿರುವ ಶಾಸನಗಳು ಮತ್ತು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ, ಕಾರ್ಮಿಕ ಸಂಘ–ಸಂಘಟನೆಗಳು ಇಲ್ಲದ ಉತ್ಪಾದನಾ ಘಟಕಗಳನ್ನು ಅಸಂಘಟಿತ ಮತ್ತು ಅನೌಪಚಾರಿಕ ಘಟಕಗಳೆಂದೂ, ಅಲ್ಲಿ ದುಡಿಯುವ ದುಡಿಮೆಗಾರರನ್ನು ಅಸಂಘಟಿತ ದುಡಿಮೆಗಾರರೆಂದೂ ಕರೆಯುವರು. ಈ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವವರಲ್ಲಿ ಮಹಿಳೆಯರ ಪಾಲು ದೊಡ್ಡದು.

ಯಾವುದೇ ಸಂಘ ಅಥವಾ ಸಂಘಟನೆಗಳಿಂದ ಹೊರತಾದ ಅಸಂಘಟಿತ ವಲಯದಲ್ಲಿ, ದುಡಿಮೆಗಾರರು ಅತೀ ಹೆಚ್ಚು ಶೋಷಣೆಗೆ ಈಡಾಗುತ್ತಾರೆ. ಇವರಿಗೆ ಸ್ವಾತಂತ್ರ್ಯ ಸ್ವಾಯತ್ತತೆ ಇಲ್ಲದಿರುವುದರಿಂದ ತಮ್ಮ ಒಲವು ನಿಲುವುಗಳನ್ನು ಪ್ರತಿಷ್ಠಾಪಿಸಲು ಅಥವಾ ಹಕ್ಕು ಚಲಾಯಿಸಲು ಸಾಧ್ಯವಾಗದ ಕಾರ್ಮಿಕರನ್ನು ಫ್ಲೆಕ್ಸಿಬಲ್ ಲೇಬರ್ ಎನ್ನುತಾರೆಂದು ಅಭಿಪ್ರಾಯವಿದೆ.

"ಯಾವ ದುಡಿಮೆಯಲ್ಲಿ ಒಂದೇ ಉದ್ದೇಶಕ್ಕಾಗಿ ಒಗ್ಗೂಡಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲವೋ ಅವೆಲ್ಲವೂ ಅಸಂಘಟಿತ ವಲಯಗಳು" ಎಂದು ಕಾರ್ಮಿಕ ಆಯೋಗ ಅಸಂಘಟಿತ ವಲಯವನ್ನು ವ್ಯಾಖ್ಯಾನಿಸಿದೆ.

ಕೃಷಿ ಕ್ಷೇತ್ರದ ಮತ್ತು ಕಟ್ಟಡ ನಿರ್ಮಾಣ ಕಾಮಗಾರಿಯ ಕೂಲಿ ಕಾರ್ಮಿಕರು, ಗೃಹ ಕೈಗಾರಿಕೆಗಳಲ್ಲಿ ತೊಡಗಿರುವವರು, ಕುಟುಂಬ ಆಧಾರಿತ ದುಡಿಮೆಗಾರರು, ಬೀಡಿ ಕಟ್ಟುವವರು,

ಊದು ಬತ್ತಿ ತಯಾರಕರು, ಮೇಣದ ಬತ್ತಿ ತಯಾರಿಸುವವರು ಅಲ್ಲದೆ ಸ್ವಯಂ ಉದ್ಯೋಗಿಗಳು, ಇವರನ್ನೆಲ್ಲಾ ಅಸಂಘಟಿತ ವಲಯದ ಕಾರ್ಮಿಕರೆಂದು ಕರೆಯಲಾಗುತ್ತದೆ.

ಅಸಂಘಟಿತ ವಲಯವೆಂದು ಗುರುತಿಸುವ ಅನೇಕ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಅಧಿಕವಾಗಿದೆ. ದುಡಿಮೆಯಲ್ಲಿ ಅಧಿಕ ಸಂಖ್ಯೆಯ ಮಹಿಳಾ ದುಡಿಮೆಗಾರರಿದ್ದಾರೆ. ವ್ಯವಸಾಯದಲ್ಲಿ ನಿರತರಾಗಿರುವ ಒಟ್ಟು ಜನರಲ್ಲಿ ೫೧.೨ ಪ್ರತಿಶತ ಮಹಿಳೆಯರಿದ್ದಾರೆ. ಪುರುಷರ ಸಂಖ್ಯೆ ೪೮.೮ ಪ್ರತಿಶತ ಮಾತ್ರ ಅಂದರೆ ಪುರುಷರಿಗಿಂತ ಆರು ಲಕ್ಷದಷ್ಟು ಅಧಿಕ ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ದುಡಿಯುತ್ತಿರುವುದಾಗಿ ಒಂದು ಅಧ್ಯಯನ ತಿಳಿಸುತ್ತದೆ. ಇನ್ನೊಂದು ಅಧ್ಯಯನ "ಕುಟುಂಬ ಆಧಾರಿತ ದುಡಿಮೆಗಾರರು, ಬೀಡಿ ಕಟ್ಟುವವರು, ಗಂಧದ ಕಡ್ಡಿ ತಯಾರಕರು, ಮೇಣದ ಬತ್ತಿ ಹೊಸೆಯುವವರು, ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಸ್ಥರು" ಇವರನ್ನು ಅಸಂಘಟಿತ ವಲಯದ ಕಾರ್ಮಿಕರು ಎಂದು ಗುರುತಿಸುತ್ತದೆ.

ಇವರಲ್ಲದೆ ಇತರರು, ಎಂದರೆ ಬೀಡಿ ಕಾರ್ಮಿಕರು, ಮನೆಕೆಲಸದವರು, ತರಕಾರಿ, ಹೂವು, ಹಣ್ಣು ಮಾರುವವರು, ಗಾರ್ಮೆಂಟ್ ಕೆಲಸಗಾರರು, ಆಹಾರ ವಸ್ತುಗಳ ತಯಾರಕರು, ಕಮ್ಮಾರರು ಇನ್ನೂ ಅನೇಕ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರು. ಅಸಂಘಟಿತ ವಲಯವು ತುಂಬಾ ವ್ಯಾಪಕವಾದುದು. ಆಯಾ ಪ್ರದೇಶಗಳಲ್ಲಿ ದೊರೆಯುವ ಕಚ್ಚಾ ವಸ್ತುಗಳನ್ನಾಧರಿಸಿಯೂ ಅಸಂಘಟಿತ ವಲಯ ವಿಸ್ತೃತವಾಗುತ್ತಾ ಹೋಗುತ್ತದೆ. ಗೇರು ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ಗೇರು ಆಧರಿತ ಉದ್ಯೋಗವಾಗಿರಬಹುದು. ರಬ್ಬರ್ ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ರಬ್ಬರ್ ತಯಾರಿಸುವ ಉದ್ಯೋಗವನ್ನು ಅದು ಕಲ್ಪಿಸಿಕೊಡುತ್ತದೆ.

ಮಾರ್ಚ್ ೨೦೦೪ರ ಯೋಜನಾ ಪತ್ರಿಕೆಯ ವರದಿಯು ತಿಳಿಸುವಂತೆ ಭಾರತದಲ್ಲಿ ಒಟ್ಟು ೪೮೬ ಲಕ್ಷ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಮಹಿಳೆಯರ ಪಾಲು ತುಂಬಾ ದೊಡ್ಡದು. ೪೨೬ ಲಕ್ಷ ಮಹಿಳೆಯರು ಗ್ರಾಮೀಣ ಹಾಗು ೬೦ ಲಕ್ಷ ಮಹಿಳೆಯರು ನಗರ ಪ್ರದೇಶದವರು ಆಗಿದ್ದಾರೆಂದು ಈ ವರದಿಯಿಂದ ತಿಳಿದುಬರುತ್ತದೆ. ಒಟ್ಟು ಪ್ರತಿಶತ ೪೦ ರಷ್ಟು ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಮೆಗಾರರಾಗಿದ್ದಾರೆ. ಕರ್ನಾಟಕ ರಾಜ್ಯವೊಂದರಲ್ಲಿ ಅಸಂಘಟಿತ ವಲಯದಲ್ಲಿ ದುಡೀಯುವ ಮಹಿಳೆಯರ ಸಂಖ್ಯೆ ೧೬ ಲಕ್ಷಕ್ಕೂ ಮಿಕ್ಕಿದೆ. ಈ ದುಡಿಮೆಗಾರರು ಬಹುತೇಕವಾಗಿ ಕೃಷಿ ಕಾರ್ಮಿಕರಾಗಿದ್ದಾರೆ.

ಅಸಂಘಟಿತ ವಲಯದಲ್ಲಿ ಕಾರ್ಮಿಕರು ಹೆಚ್ಚಿನ ಶೋಷಣೆಗೆ ಒಳಗಾಗುವುದರಿಂದಿಗೆ ಇವರಿಗೆ ಯಾವುದೇ ರೀತಿಯ ಹೆಚ್ಚಿನ ಸೌಲಭ್ಯಗಳು ದೊರಕುವುದಿಲ್ಲ. ಇಲ್ಲಿ ಕಾರ್ಮಿಕರು ಮತ್ತು ಮಾಲಿಕರ ನಡುವೆ ಯಾವುದೇ ರೀತಿಯ ಶಾಸನಬದ್ಧ ಒಪ್ಪಂದವಿರುವುದಿಲ್ಲ ಹಾಗೂ ಸರಕಾರದ ಹಸ್ತಕ್ಷೇಪವಿರುವುದಿಲ್ಲ. ಇಲ್ಲಿ ಕೆಲಸದ ಅವಧಿ, ವೇತನ ಇತ್ಯಾದಿಗಳು ಯಾವುದೇ ರೀತಿಯ ಕಾರ್ಮಿಕ ಸಂಘಗಳ ನಿಯಂತ್ರಣದಲ್ಲಿರುವುದಿಲ್ಲ. ಈ ವಲಯದ ಜನರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆ, ವಿಮಾ ಸೌಲಭ್ಯ ಇತ್ಯಾದಿಗಳು ಇರುವುದಿಲ್ಲ. ಇಲ್ಲಿ ದುಡಿಯುವವರ ಸಂಖ್ಯೆಯನ್ನು ಸರಿಯಾಗಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಏಕೆಂದರೆ ಇವರು ಯಾವುದೇ ಓರ್ವ ಮಾಲಿಕನ ಕೈಕೆಳಗೆ ಅಥವಾ ಒಂದು ಉದ್ಯೋಗದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುವುದಿಲ್ಲ. ಅಲ್ಲದೆ ವರ್ಷಪೂರ್ತಿ ಉದ್ಯೋಗದಲ್ಲಿ ತೊಡಗಿರುವುದಿಲ್ಲ. ಅಸಂಘಟಿತ ವಲಯದಲ್ಲಿ ದುಡಿಯುವವರ ಸ್ಥಾನಮಾನ ಮತ್ತು ಜೀವನ ಮಟ್ಟವು ಕಡಿಮೆಯಾಗಿರುತ್ತದೆ. ಅಲ್ಲದೆ ಇವರು ಕಡಿಮೆ ಕೂಲಿ ಹೆಚ್ಚು ಅವಧಿಯ ಕೆಲಸ, ಉದ್ಯೋಗ ಖಾತರಿಯಿಲ್ಲದಿರುವಿಕೆ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಲ್ಲಿ ಮಾಲಿಕರು ಪಡೆಯುವ ಲಾಭ ಅಧಿಕವಾಗಿದ್ದು ಕಾರ್ಮಿಕರಿಗೆ ದೊರಕುವ ಪ್ರತಿಫಲವು ಕಡಿಮೆಯಾಗಿರುತ್ತದೆ. ನಮ್ಮ ದೇಶದಲ್ಲಿರುವ ಆದಾಯ ಮತ್ತು ಸಂಪತ್ತಿನ ಹಂಚುವಿಕೆಯಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವುದಕ್ಕೆ ಅಸಂಘಟಿತ ಕಾರ್ಮಿಕರಿಗೂ ಸೂಕ್ತ ಉದ್ಯೋಗ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಯನ್ನು ಕೊಡುವುದು ಅಗತ್ಯವಾಗಿದೆ. ಆಗ ಮಾತ್ರ ಭಾರತದಂಥ ರಾಷ್ಟ್ರವು ಮುಂದುವರಿಯಲು ಸಾಧ್ಯ.

### ೧.೩ ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು

ಭಾರತದಲ್ಲಿ ದುಡಿಯುವ ರಂಗವನ್ನು ಮಹಿಳೆ ಯಾವಾಗ ಹೇಗೆ ಪ್ರವೇಶಿಸಿದಳೆಂಬ ಪ್ರಶ್ನೆಗೆ ಸರಿಯದ ಉತ್ತರವಿಲ್ಲ. ಬೀಜ ಬಿತ್ತುವುದು, ಕಳೆ ಕೀಳುವುದು, ನೀರು ಹಾಕುವುದು, ಕೊಯ್ಲು, ಪಶು ಸಂಗೋಪನೆ, ಕೋಳಿ ಸಾಕಣಿಕೆಗಳಲ್ಲಿ ತನ್ನ ಮನೆಯ ಗಂಡಸರ ಜೊತೆ ದುಡಿಯಲಾರಂಭಿಸಿದ್ದೇ ಅಲ್ಲದೆ ಗುಡಿ ಕೈಗಾರಿಕೆಗಳಾದ ಬೀಡಿ ಕಟ್ಟುವುದು, ಹಗ್ಗ ಹೊಸೆಯುವುದು, ಮಡಕೆ ಮಾಡುವುದು ಮುಂತಾದವುಗಳಿಗೆ ಕೈ ಹಚ್ಚಿದಳು. ಆ ನಂತರದ ದಿನಗಳಲ್ಲಿ ಕೈಗಾರಿಕೆ ಮತ್ತು ಗಣಿಗಳಲ್ಲಿ ದುಡಿಯಲು ಆರಂಭಿಸಿದಳು. ಹಾಗೆಯೇ ನರ್ಸಿಂಗ್, ಶಿಕ್ಷಣದಂಥ ಉದ್ಯೋಗದಿಂದ ಇಂದು ಇಂಜಿನಿಯರಿಂಗ್, ಕೈಗಾರಿಕಾ ವಿನ್ಯಾಸ, ಕಂಪ್ಯೂಟರ್, ವಾಸ್ತುಶಿಲ್ಪದಂಥ ರಂಗದಲ್ಲಿಯೂ ಅವಳು ಕಾಲೂರಿದ್ದಾಳೆ.

ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ನಿರಂತರವಗಿ ಪುರುಷರ ಅವಲಂಬಿಯಾಗಿಯೇ ಇರಿಸುವ ಕಾರಣದಿಂದಾಗಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ನೀಡುವ ಶಿಕ್ಷಣದಲ್ಲಿಯೇ ಮೂಲಭೂತ ವ್ಯತ್ಯಾಸವನು ಕುಟುಂಬ ಮಾಡುತ್ತದೆ. ಹೆಚ್ಚಿನ ಕುಟುಂಬಗಳಲ್ಲಿ ಹೆಣ್ಣು ಮಕ್ಕಳಿಗೆ ವೃತ್ತಿಪರ ಶಿಕ್ಷಣ, ವೃತ್ತಿ ಕೌಶಲ ಶಿಕ್ಷಣವನ್ನು ನೀಡುವುದರ ಬಗ್ಗೆ ಸಹಮತವಿರುವುದಿಲ್ಲ. ಮಹಿಳೆಯರ ಶಿಕ್ಷಣ ಮತ್ತು ತರಬೇತಿಗೆ ಬಂಡವಾಳ ಹೂಡಲು ಯಾವುದೇ ಪ್ರೇರಣೆಗಳಿಲ್ಲ. ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಮಹಿಳಾ ಕಾರ್ಮಿಕರು ಅಸಂಘಟಿತ ವಲಯದಲ್ಲಿಯೇ ದುಡಿಯಲು ಕಾರಣವಾಗಿದೆ. ಭಾರತದಲ್ಲಿ ಒಟ್ಟು ೫೦೬ ಲಕ್ಷ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಒಟ್ಟು ಪ್ರತಿಶತ ೫೦ ರಷ್ಟು ಮಹಿಳೆಯರು ಅಸಂಘಟಿತ ವಲಯದ ದುಡಿಮೆಗಾರರಾಗಿದ್ದಾರೆ. ಅದರಲ್ಲಿ ಬಹುತೇಕವಾಗಿ ಕೃಷಿ ಕಾರ್ಮಿಕರೇ ಆಗಿದ್ದಾರೆ.

೨೦೦೪ರ ಜನಗಣತಿಯ ಪ್ರಕಾರ ಅಸಂಘತಿತ ವಲಯವನ್ನು ೯ ಪ್ರಕಾರದ ಉದ್ಯೋಗಗಳಾಗಿ ವಿಂಗಡಿಸಿದ್ದು ಅವುಗಳ ವಿವರ ಈ ಕೆಳಗಿನಂತಿದೆ:

೧. ಸಾಗುವಳಿದಾರರು: ಗದ್ದೆಯನ್ನು ಊಳುವವರು.

೨. ಕೃಷಿ ಕಾರ್ಮಿಕರು: ಅಕ್ಕಿ, ಗೋಧಿ ಇತ್ಯಾದಿಗಳನ್ನು ಬೆಳೆಸುವವರು.

೩. ಗುಡಿ ಕೈಗಾರಿಕೆ, ಹೈನುಗಾರಿಕೆ, ಅರಣ್ಯಗಾರಿಕೆ, ತೋಟಗಾರಿಕೆ: ಮಡಿಕೆ ತಯಾರಿಕೆ, ಬುಟ್ಟಿ ತಯಾರಿಕೆ, ಹಾಲು ಉತ್ಪಾದನೆ, ಜೇನು ಮುಂತಾದ ಅರಣ್ಯದಲ್ಲಿ ದೊರೆಯುವ ವಸ್ತುಗಳು, ಸೇಬು, ಚಹಾ, ಕಾಫಿ ಇತ್ಯಾದಿ.

೪. ಕುಟುಂಬ ಸಂಬಂಧಿ ಕೈಗಾರಿಕೆ : ತಿಂಡಿ ತಯಾರಿಸುವಿಕೆ

೫. ಕಟ್ಟಡ ನಿರ್ಮಾಣ

೬. ವ್ಯಾಪಾರ ವಾಣಿಜ್ಯ: ಬಟ್ಟೆ ಅಂಗಡಿಗಳು, ದಿನಸಿ ಅಂಗಡಿಗಳು ಇತ್ಯಾದಿ.

೭. ಸಾರಿಗೆ ಸಂಪರ್ಕ

೮. ಇತರೆ

ಈ ಪಟ್ಟಿಯಲ್ಲಿ ಮೊದಲಿನೆರಡು ಕೃಷಿ ಸಂಬಂಧಿ ಚಟುವಟಿಕೆಗಳು ಉಳಿದವುಗಳು ಕೃಷಿಯೇತರವಾದವುಗಳು.

ಇತರೆ ಅಧ್ಯಯನಗಳ ಪ್ರಕಾರ ಇನ್ನೂ ಅನೇಕ ಉದ್ಯೋಗಗಳು ಈ ವಲಯಕ್ಕೆ ಸೇರುತ್ತವೆ. ಸಾಂಪ್ರದಾಯಿಕ ಹಾಗೂ ಆಧುನಿಕ ಎರಡು ರೀತಿಯ ದುಡಿಮೆಗಳನ್ನು ಹೀಗೆ ಗುರುತಿಸಲಾಗಿದೆ.

ಕೃಷಿ, ಹೈನುಗಾರಿಕೆ, ಪಶುಪಾಲನೆ, ಮೀನುಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆ, ಕೈಮಗ್ಗದ ಕೆಲಸ, ಕಟ್ಟಡ ನಿರ್ಮಾಣ, ಬೆಂಕಿ ಪೊಟ್ಟಣ ತಯಾರಿಕೆ, ಬಿದಿರು ಬುಟ್ಟಿ, ಬಟ್ಟೆ ಹೊಲಿಯುವುದು, ಸಿದ್ಧ ಉಡುಪು ತಯಾರಿಕೆ, ಮನೆಗಳಲ್ಲಿ ಕಸಮುಸುರೆ ಹಾಗೂ ಬಟ್ಟೆ ತೊಳೆಯುವ ಆಳುಗಳಾಗಿ, ಹಂಗಾಮಿ ಅಥವಾ ದಿನಗುಲಿ ನೌಕರಿ, ಚಿಲ್ಲರೆ ವ್ಯಾಪಾರ, ತಲೆ ಮೇಲೆ ಹೊತ್ತು ಮಾರುವುದು ಮತ್ತು ಆಹಾರ ಸಂಸ್ಕರಣೆ ಇತ್ಯಾದಿಗಳು. ಇದಲ್ಲದೆಯೂ ಬಟ್ಟೆ ಅಂಗಡಿಗಳಲ್ಲಿ ಸೇಲ್ಸ್‌ಗರ್ಲ್ಸ್ ಕೆಲಸ, ಕೆಲವು ಖಾಸಗಿ ಕಛೇರಿಗಳಲ್ಲಿ ರಿಸೆಪ್ಷನಿಸ್ಟ್ ಆಗಿಯೂ ದುಡಿಯುವ ಸುಶಿಕ್ಷಿತ ಮಹಿಳೆ, ಅರೆಕಾಲಿಕ ಉಪನ್ಯಾಸಕರು, ಶಿಕ್ಷಕರು ಇವರನ್ನು ಅಸಂಘಟಿತ ವಲಯಕ್ಕೆ ಸೇರಿಸಬಹುದಾಗಿದೆ.

## ೧.೩ ಅಧ್ಯಯನದ ಸಮಸ್ಯೀಕರಣ

ಭಾರತದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು, ಚಳುವಳಿಗಳನ್ನು, ಮಹಿಳಾ ಸಬಲೀಕರಣ, ಮಹಿಳಾ ಉದ್ಯಮಶೀಲತೆ ಇತ್ಯಾದಿ ವಿಷಯಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿರುತ್ತವೆ. ಆದರೆ ಅಸಂಘಟಿತ ಕ್ಷೇತ್ರದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಅಧ್ಯಯನಗಳು ನಡೆದಿಲ್ಲವಾದುದರಿಂದ ಅವುಗಳ ಬಗ್ಗೆ ಅನೇಕ ಕುತೂಹಲಕಾರಿ ಪ್ರಶ್ನೆಗಳು ಮೂಡುತ್ತವೆ. ಆದುದರಿಂದ ಇದರ ಬಗ್ಗೆ ಒಂದು ವಾಸ್ತವ ಚಿತ್ರಣದ ಅರಿವನ್ನು ಪಡೆಯಲು ಈ ಸಂಶೋಧನಾ ಪ್ರಬಂಧವು ಅಗತ್ಯವೆನಿಸುತ್ತದೆ.

ಈ ಅಧ್ಯಯನದಲ್ಲಿ ಬಟ್ಟೆಅಂಗಡಿಯಲ್ಲಿ ದುಡಿಯುವ ಮಹಿಳೆಯ ಕುರಿತು ಚಿಂತನೆ ವಿಶ್ಲೇಷಣೆ ಮತ್ತು ಸಂಶೋಧನೆಗಳಿಂದ ಕೂಡಿದ ಅಧ್ಯಯನವಾಗಿದೆ. ಇದರಲ್ಲಿ ಮಹಿಳೆಯರ ಅನುಭವಗಳು, ಪುರುಷರ ಮತ್ತು ಮಹಿಳೆಯರ ನಡುವಿನ ಸಂಬಂಧಗಳು, ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಸಾಧನೆಗಳನ್ನು ಕೇಂದ್ರ ಬಿಂದುವಾಗಿರಿಸಿ ಅಧ್ಯಯನ ನಡೆಸಲಾಗುತ್ತದೆ.

ಈ ಅಧ್ಯಯನದಲ್ಲಿ ದಾರ್ಶನಿಕರ ಪ್ರಕಾರ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಕುರಿತು ಚಿಂತನೆ ಮತ್ತು ವಿಶ್ಲೇಷಣೆ ಹಾಗೂ ಅವರಿಗಿರುವ ಮುಕ್ತ ಅವಕಾಶಗಳ ಕುರಿತ ಅಧ್ಯಯನ ಈ ಅಧ್ಯಯನದಲ್ಲಿ ಅಡಕವಾಗಿದೆ. ಮಹಿಳೆಯರ ಪರಿಸ್ಥಿತಿಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅರ್ಥೈಸಿ, ಜಾಗತಿಕ ಸಂಬಂಧಗಳು, ಅವರ ತುಳಿತ ಮತ್ತು ತಾರತಮ್ಯಕ್ಕೆ

ಕಾರಣಗಳನ್ನು ಗುರುತಿಸಿ ಅವರ ಪರಿಸ್ಥಿತಿಯನ್ನು ಬದಲಾಯಿಸಲು ನಡೆಸುವ ಫಲವೇ ಈ ಅಧ್ಯಯನ.

ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಸಮಾನತೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ವಿಚಾರಗಳನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಬಟ್ಟೆಯ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ವಿಷಯ, ಸಮಸ್ಯೆ, ಸಮಸ್ಯೆಗಳಿಗೆ ಪರಿಹಾರ ಹಾಗೂ ಮಹಿಳೆಯರ ಅಭಿವೃದ್ಧಿಗೆ ಪರಿಹಾರಗಳನ್ನು ಸೂಚಿಸುವ ಅದರ ಮೂಲಕ ಸಮಾಜದ ಮುಖ್ಯವಾಹಿನಿಯಲ್ಲಿ ಮಹಿಳೆಯರನ್ನು ಸಮಗ್ರಗೊಳಿಸುವುದರ ಅಧ್ಯಯನವೇ ಈ ಅಧ್ಯಯನವಾಗಿದೆ.

ಮೇಲ್ನೋಟಕ್ಕೆ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳು ಉತ್ತಮವೆಂದು ಅನಿಸಬಹುದು ಆದರೆ ಅವರ ಹಿನ್ನೆಲೆ, ಸಂಬಳ, ಅವರ ಸ್ಥಿತಿಗತಿಗಳ ಬಗ್ಗೆ ತಿಳಿಯಲು ಇಲ್ಲಿ ಪ್ರಯತ್ನ ಮಾಡಲಾಗುವುದು.

ನಗರಗಳಲ್ಲಿ ಹೆಚ್ಚು ಬಟ್ಟೆ ಅಂಗಡಿಗಳು ಇರುವ ಕಾರಣ ಅಲ್ಲಿಯ ಮಹಿಳೆಯರು ಮಾತ್ರ ದುಡಿಯುತ್ತಾರೆ ಎಂದು ಅನಿಸಬಹುದು. ಆದರೆ ಅಲ್ಲಿಗೆ ಹಳ್ಳಿಗಳಿಂದಲೂ ಹೆಚ್ಚು ಪ್ರಮಾಣದಲ್ಲಿ ಇಲ್ಲಿ ದುಡಿಯಲು ಬರುತ್ತಾರೆ. ಅವರಿಗೆ ಯಾವ ಯಾವ ಸೌಕರ್ಯಗಳು ಇವೆ ಮತ್ತು ಇಲ್ಲ ಎಂಬುದನ್ನು ತಿಳಿಯಲು ಒಂದು ಕಾರಣವಾಗಿದೆ.

ಬಟ್ಟೆ ಮಳಿಗೆಗಳಲ್ಲಿ ಮಹಿಳಾ ಉದ್ಯೋಗಿಗಳಿಗೆ ಅನುಕೂಲಕರವಾದ ಕಾನೂನುಗಳನ್ನು ಜಾರಿಗೊಳಿಸುವಲ್ಲಿ ಮತ್ತು ಅವರ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವಲ್ಲಿ ಯಾವ ರೀತಿಯಲ್ಲಿ ಉತ್ಸಾಹ ತೋರಿಸಬಹುದು ಎಂದು ತಿಳಿಯಲು ಈ ಅಧ್ಯಯನದ ಮೂಲಕ ಪ್ರಯತ್ನ ಮಾಡಲಾಗುವುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಂಶೋಧನಾ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

**೧.೪ ಅಧ್ಯಯನದ ಉದ್ದೇಶಗಳು**

ಈ ಅಧ್ಯಯನದ ಮೂಲ ಉದ್ದೇಶವು ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಬದಲಾಯಿಸಿ, ಅವರ ಮುಖಾಂತರ ಅವರ ನೈಜ ಚಿತ್ರಣವನ್ನು ತಿಳಿದುಕೊಳ್ಳುವುದು. ಅವರ ಸಮಸ್ಯೆಗಳ ಕುರಿತು ಜಾಗೃತಿ ಮೂಡಿಸುವುದು ಸಂಕ್ಷಿಪ್ತವಾಗಿ ಮಹಿಳಾ ಅಧ್ಯಯನದ ಉದ್ದೇಶಗಳು ಈ ಕೆಳಗಿನಂತಿವೆ.

- ಅಗೋಚರವೆಂದು ಪರಿಗಣಿಸಲ್ಪಟ್ಟ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯನ್ನು ಸಮಾಜದಲ್ಲಿ ಗುರುತಿಸುವಂತೆ ಮಾಡುವುದು.
- ಪಾತ್ರ, ಹಕ್ಕು ಮತ್ತು ಕರ್ತವ್ಯಗಳ ಕುರಿತ ದೃಷ್ಟಿಕೋನಗಳಲ್ಲಿ ಪರಿವರ್ತನೆಯನ್ನುಂಟು ಮಾಡುವುದು.
- ಮಹಿಳಾ ಸಮಸ್ಯೆ ಮತ್ತು ಅವರ ಕುರಿತ ವಿವಾದಸ್ಪದ ವಿಷಯಗಳ ಕುರಿತು ಸ್ತ್ರೀ ಪುರುಷರಲ್ಲಿ ಪ್ರಜ್ಞೆ ಮೂಡಿಸಿ ಅವರಲ್ಲಿರುವ ಸಾಮಾರ್ಥ್ಯವನ್ನು ರಾಷ್ಟ್ರದ ಪ್ರಗತಿಗೆ ಬಳಸಿಕೊಳ್ಳುವುದು.
- ಮಾನವ ಹಕ್ಕುಗಳನ್ನು ಗೌರವಿಸಿ ಅನುಸರಿಸುವಂತೆ ಮಾಡುವುದು.
- ಸಮಾಜದಲ್ಲಿ ಬಟ್ಟೆ ಅಂಗಡಿಯ ಮಹಿಳಾ ಉದ್ಯೋಗಿ ನಿರ್ವಹಿಸುವ ಪಾತ್ರಗಳ ವಿವಿಧ ಆಯಾಮಗಳನ್ನು ಗುರುತಿಸುವ, ತಿಳುವಳಿಕೆ ಮೂಡಿಸುವ ಮತ್ತು ಅಂಗಿಕರೀಸುವಂತೆ ಮಾಡುವ ಉದ್ದೇಶ.
- ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ಪರಿಶೀಲಿಸುವುದು.
- ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಸಂಬಳ, ಕೆಲಸದ ಅವಧಿ, ಇತರ ಸವಲತ್ತುಗಳನ್ನು ಅಧ್ಯಯನ ಮಾಡುವುದು.
- ಕೆಲಸ ಮಾಡುವ ಸ್ಥಳದಲ್ಲಿ ಮಹಿಳಾ ದೌರ್ಜನ್ಯ ಇದೆಯೇ ಎಂದು ಅಧ್ಯಯನ ಮಾಡುವುದು.
- ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಅಭಿಪ್ರಾಯ ಸಾಮರ್ಥ್ಯವನ್ನು ತಿಳಿಯುವುದು.
- ಈ ಎಲ್ಲದರ ಹಿಂದೆ ಅಸಂಘಟಿತ ವಲಯದ ಅಭಿವೃದ್ಧಿ, ನೀತಿ ನಿರೂಪಣೆಗೆ ಕೊಡುಗೆ ನೀಡುವುದು.

**೧.೫ ಅಧ್ಯಯನದ ಊಹೆಗಳು**

- ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಸುಧಾರಣೆ ಆಗಿದೆ.

- ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಬಡತನ ಸ್ವಲ್ಪ ಮಟ್ಟಿಗೆ ನಿರ್ಮೂಲನವಾಗಿದೆ.

- ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಹಕ್ಕುಗಳ ಬಗ್ಗೆ ತಿಳುವಳಿಕೆಯನ್ನು ಪಡೆದಿರುತ್ತಾರೆ.

- ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳು ಅಭಿವೃದ್ಧಿಯನ್ನು ಹೊಂದುತ್ತಿದ್ದಾರೆ.

- ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳು ಸಾಮಾಜಿಕ ಆರ್ಥಿಕವಾಗಿ ರಾಜಕೀಯವಾಗಿ ಶೈಕ್ಷಣಿಕವಾಗಿ ಮುಂದೆ ಬರುತ್ತಿದ್ದಾರೆ.

**೧.೬ ಅಧ್ಯಯನದ ವಿಧಾನಗಳು**

- ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳಿಂದ ಮಾಹಿತಿಗಳನ್ನು ಸಂಗ್ರಹಿಸಲು ಕೆಲವು ವಿಧಾನಗಳನ್ನು ಪಾಲಿಸಲಾಗಿದೆ. ಮಾಹಿತಿ ಸಂಗ್ರಹಣೆಯನ್ನು ಎರಡು ವಿಧಗಳಲ್ಲಿ ಮಾಡಲಾಗಿದೆ. ೧. ಅನುಷಂಗಿಕ ಮತ್ತು ಪ್ರಾಥಮಿಕ ವಿಧಾನ. ಪ್ರಾಥಮಿಕ ವಿಧಾನದಲ್ಲಿ ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳಿಂದ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಣೆಯನ್ನು ಮಾಡಲಾಗಿದೆ. ಎರಡನೇಯದು ಅನುಷಂಗಿಕ ವಿಧಾನ. ಇಲ್ಲಿ ಅಧ್ಯಯನದ ಸೈಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು ಮತ್ತು ಸಂಶೋಧನ ಲೇಖನಗಳ ಮೂಲಕ ಪಾರಮರ್ಶೆ ಮಾಡಲಾಗಿದೆ ಮತ್ತು ಇತ್ತೀಚಿಗಿನ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಬಗ್ಗೆ ಪರಿಶೀಲಿಸಲು ದಿನಪತ್ರಿಕೆಗಳು ಮತ್ತು ಅಂತರ್‌ಜಾಲಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

  ಹೀಗೆ ಎರಡು ವಿಧಾನಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ಸೂಕ್ತ ಕೋಷ್ಟಕಗಳಾನ್ನಾಗಿ ವಿಂಗಡಿಸಿ ಸರಳ ಅಂಕಿ ಅಂಶಗಳ ತಂತ್ರಗಳಾದ ಅನುಪಾತ ಪ್ರಮಾಣ ಮತ್ತು ಶೇಕಡಾವಾರು ಪ್ರಮಾಣಗಳ ಮೂಲಕ ವಿಶ್ಲೇಷಿಸಿ ವಿಶ್ಲೇಷಣೆ ಮಾಡಲಾಗಿದೆ.

- ಅಧ್ಯಯನದ ಸೈದ್ಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು ಮತ್ತು ಸಂಶೋಧನಾ ಲೇಖನಗಳ ಮೂಲಕ ಪರಾಮರ್ಶೆ.

- ಇತ್ತೀಚೆಗೆ ಮಹಿಳೆಯರು ಬಟ್ಟೆ ಅಂಗಡಿಗಳಲ್ಲಿ ತೊಡಗಿಸಿಕೊಂಡಿರುವುದನ್ನು ಪರಿಶೀಲಿಸಲು ವೆಬ್‌ಸೈಟುಗಳನ್ನು ಉಪಯೋಗಿಸುವುದು.

- ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ಸೂಕ್ತ ಕೋಷ್ಟಕಗಳನ್ನಾಗಿ ವಿಂಗಡಿಸಿ ಸರಳ ಅಂಕಿ ಅಂಶಗಳ ತಂತ್ರಗಳಾದ ಅನುಪಾತ ಪ್ರಮಾಣ ಮತ್ತು ಶೇಕಡಾವಾರು ಪ್ರಮಾಣಗಳ ಮೂಲಕ ವಿಶ್ಲೇಷಿಸಿ ಅರ್ಥೈಸಲಾಗಿದೆ.

**೧.೭ ಅಧ್ಯಯನದ ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳು**

ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳು ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ ಎಂಬ ಈ ಸಂಶೋಧನೆಗೆ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕರ್ನಾಟಕ ರಾಜ್ಯದಲ್ಲಿನ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿಗೆ ಸೀಮಿತಗೊಳಿಸಲಾಗಿದೆ.

ಮಂಗಳೂರು ತಾಲೂಕಿನಲ್ಲಿ ಒಟ್ಟು ಜನಸಂಖ್ಯೆಯ ಅರ್ಧದಷ್ಟು ಮಹಿಳೆಯರಿದ್ದು, ಇತ್ತೀಚಿನ ದಿನಗಳಲ್ಲಿ ಮಹಿಳೆಯು ಪ್ರತಿಯೊಂದು ಕ್ಷೇತ್ರದಲ್ಲಿಯೂ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರಿಗೆ ಯಾವ ರೀತಿ ಸಹಾಯಕವಾಗಿದೆ ಹಾಗೂ ಅವುಗಳ ವಿಷಯಗಳನ್ನು ತಿಳಿಯಲು ಹಾಗೂ ಅಭಿವೃದ್ಧಿಯನ್ನು ಹೆಚ್ಚಿಸುವ ಸಾಧ್ಯತೆಗಳ ಬಗ್ಗೆ ಪರಾಮರ್ಶೆ ನಡೆಸಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗುತ್ತದೆ. ಈ ನಿಟ್ಟಿನಲ್ಲಿ ಈ ಸಂಶೋಧನಾ ಅಧ್ಯಯನವನ್ನು ಐದು ಮುಖ್ಯ ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ಅಧ್ಯಾಯ ೧: ಅಧ್ಯಯನದ ಸ್ವರೂಪ ಮತ್ತು ಉದ್ದೇಶ

ಪೀಠಿಕೆ–ಮಹಿಳೆ, ಅಸಂಘಟಿತ ಮತ್ತು ಸಂಘಟಿತ ವಲಯಗಳ ವಿವರಗಳು, ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು, ಅಧ್ಯಯನದ ಸಮಸ್ಯೀಕರಣ, ಅಧ್ಯಯನದ ಉದ್ದೇಶಗಳು, ಅಧ್ಯಯನದ ಊಹೆಗಳು, ಅಧ್ಯಯನದ ವಿಧಾನಗಳು, ಅಧ್ಯಯನದ ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳನ್ನು ಒಳಗೊಂಡಿದೆ.

ಅಧ್ಯಾಯ ೨ : ಅಸಂಘಟಿತ ವಲಯದ ಸ್ಥೂಲ ಪರಿಚಯ

ಪೀಠಿಕೆ, ಅಸಂಘಟಿತ ವಲಯದ ಉಗಮ, ಪ್ರಾಮುಖ್ಯತೆ ಮತ್ತು ಗುಣಲಕ್ಷಣಗಳು, ಅಸಂಘಟಿತ ವಲಯದ ಕೊಡುಗೆ, ಅಸಂಘಟಿತ ವಲಯದ ಸಮಸ್ಯೆಗಳು, ಅಸಂಘಟಿತ ವಲಯ ಮತ್ತು ಸಂಘಟಿತ ವಲಯಗಳ ವ್ಯತ್ಯಾಸಗಳ ಮೇಲೆ ಬೆಳಕು ಚೆಲ್ಲುತ್ತದೆ.

ಅಧ್ಯಾಯ ೩: ಅಸಂಘಟಿತ ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅವಲೋಕನಾ

ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆ, ಅಸಂಘಟಿತ ವಲಯದ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು, ಅಸಂಘಟಿತ ವಲಯದ ಮಹಿಳಾ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ, ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರ ಬಗ್ಗೆ ವಿವರಿಸುತ್ತದೆ.

ಅಧ್ಯಾಯ ೪: ಮಂಗಳೂರು ತಾಲೂಕಿನಲ್ಲಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು – ಕ್ಷೇತ್ರಕಾರ್ಯಾಧಾರಿತ ಮಾಹಿತಿ ವಿಶ್ಲೇಷಣೆ

ಪೀಠಿಕೆ, ಬಟ್ಟೆ ಅಂಗಡಿಗಳ ಮಹಿಳಾ ಉದ್ಯೋಗಿಗಳ ಪಾತ್ರದ ಬಗೆ ಕ್ಷೇತ್ರ ಕಾರ್ಯಾಧಾರಿತ ಮಾಹಿತಿಗಳನ್ನು ಉಪಯೋಗಿಸಿ ವಿಶ್ಲೇಷಿಸಲಾಗುವುದು. ಈ ಅಧ್ಯಾಯವು ಅಸಂಘಟಿತ ವಲಯದ ಬಟ್ಟೆ ಅಂಗಡಿಗಳ ಮಹಿಳಾ ಉದ್ಯೋಗಿಗಳ ವಿವರಗಳು, ಮಾಹಿತಿಗಳು, ವ್ಯವಸ್ಥೆ, ಇತ್ಯಾದಿಗಳನ್ನು ಒಳಗೊಂಡಿದೆ.

ಅಧ್ಯಾಯ ೫: ಸಲಹೆ ಮತ್ತು ಸೂಚನೆಗಳು, ಸಂಹಾರ

ಪೀಠಿಕೆ, ಸಾರಾಂಶ, ಸಲಹೆ ಸೂಚನೆಗಳು, ಭವಿಷ್ಯದ ಸಂಶೋಧನಾ ಸಾಧ್ಯತೆಗಳು ಹಾಗೂ ಸಂಹಾರಗಳನ್ನೊಳಗೊಂಡಿದೆ.

ಸಂಶೋಧಕರು ಗುರುತಿಸಿರುವಂತೆ ಪ್ರಸ್ತುತ ಅಧ್ಯಯನದ ಪ್ರಮುಖ ಮಿತಿಗಳು, ವಸ್ತು ವಿಷಯ ನಿರ್ದಿಷ್ಟತೆ ಹಾಗೂ ಪ್ರಾದೇಶಿಕ ನಿರ್ದಿಷ್ಟತೆ ಅಥವಾ ಮಿತಿಗಳಿಗೊಳಪಟ್ಟಂತೆ ಈ ಕೆಳಗಿನಂತೆ ಮಾಡಲಾಗಿದೆ:

- ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ ಎಂಬ ಈ ಅಧ್ಯಯನದ ವ್ಯಾಪ್ತಿಯನ್ನು ಮಂಗಳೂರು ತಾಲೂಕಿನ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ.
- ಈ ಅಧ್ಯಯನದಲ್ಲಿ ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳನ್ನು ಮಾತ್ರ ಪರಿಗಣಿಸಲಾಗಿದೆ.

- ಈ ಅಧ್ಯಯನದಲ್ಲಿ ಅಸಂಘಟಿತ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳ ಪ್ರಗತಿಗೆ ಪೂರಕವಾದ ಅಂಶಗಳ ಕುರಿತಂತೆ ಈ ಅಧ್ಯಯನ ಸೀಮಿತಗೊಂಡಿರುತ್ತದೆ.

- ಈ ಅಧ್ಯಯನದಲ್ಲಿ ಸಮಯದ ಅಭಾವ ಅಂದರೆ ಸಮಯದ ಮಿತಿಯನ್ನು ನಿರ್ಧರಿಸಲಾಗಿದೆ.

- ಈ ಅಧ್ಯಯನದಲ್ಲಿ ನೀತಿ ನಿಯಮದ ವಿರುದ್ಧ ಹೋಗಿರುವುದಿಲ್ಲ.

- ಈ ಅಧ್ಯಯನದಲ್ಲಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯ ಸಮಸ್ಯೆಗಳು ಮತ್ತು ಅವರಿಗೆ ಸಂಬಂಧಪಟ್ಟ ವಿಷಯವನ್ನು ಮಾತ್ರ ಪರಿಗಣಿಸಲಾಗಿದೆ.

- ಈ ಅಧ್ಯಯನವು ಈಗಾಗಲೇ ಬಂದಿರುವ ಬರಹಗಳ ಹಿನ್ನೆಲೆಯಲ್ಲಿ ರೂಪಗೊಂಡಿಲ್ಲ ಎನ್ನುವುದು ಈ ಅಧ್ಯಯನ ಸೀಮಿತಗೊಂಡಿರುತ್ತದೆ.

ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಬಗ್ಗೆ ಸಂಶೋಧನೆ ಕಾರ್ಯವನ್ನು ಕೈಗೊಂಡದರಲ್ಲಿ ಪ್ರಾಸ್ತವನೆಯನ್ನು ಈ ಮೂಲಕ ರಚಿಸಲಾಗಿದೆ. ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುವ ಕಾರಣ ಅಸಂಘಟಿತ ಸೂಕ್ಷ್ಮ ನೆಲೆಗಳು ಇತ್ಯಾದಿ ಚರ್ಚೆಗಳನ್ನು ಮುಂದಿನ ಅದ್ಯಾಯದಲ್ಲಿ ವಿವರಿಸಲಾಗಿದೆ.

# ಅಧ್ಯಾಯ ೨

## ಅಸಂಘಟಿತ ವಲಯದ ಸ್ಥೂಲ ಪರಿಚಯ

೨.೧ ಪೀಠಿಕೆ

೨.೨ ಅಸಂಘಟಿತ ವಲಯದ ಉಗಮ

೨.೩ ಅಸಂಘಟಿತ ವಲಯದ ಪ್ರಾಮುಖ್ಯ ಮತ್ತು ಗುಣಲಕ್ಷಣಗಳು

೨.೪ ಅಸಂಘಟಿತ ವಲಯದ ಕೊಡುಗೆ

೨.೫ ಅಸಂಘಟಿತ ವಲಯದ ಸಮಸ್ಯೆಗಳು

೨.೬ ಅಸಂಘಟಿತ ವಲಯ ಮತ್ತು ಸಂಘಟಿತ ವಲಯದ ವ್ಯತ್ಯಾಸಗಳು

## ೨.೧ ಪೀಠಿಕೆ

ರಾಷ್ಟ್ರಿಯ ಕೂಲಿ ನೀತಿಯೊಂದು ವಿಭಿನ್ನ ವರ್ಗಗಳ ಹಿತಾಸಕ್ತಿಯನ್ನು ಸಮತೋಲನಗೊಳಿಸುವುದು ಮತ್ತು ಅವುಗಳನ್ನು ಸಾಧ್ಯವಿರುವಷ್ಟು ಮಟ್ಟಿಗೆ ರಾಷ್ಟ್ರೀಯ ಹಿತಾಸಕ್ತಿಗಳೊಂದಿಗೆ ಹೊಂದಿಕೊಳ್ಳುವಂತೆ ಮಾಡುವುದು. ಕೂಲಿ ನೀತಿಯೊಂದು ಆರ್ಥಿಕತೆಯಲ್ಲಿನ ಎಲ್ಲಾ ಬಗೆಯ ಕೂಲಿ ಪಾವತಿಗಳ ಮೇಲೆ ಶಿಸ್ತನ್ನು ವಿಧಿಸುವ ಉದ್ದೇಶ ಹೊಂದಿದೆ. ಈ ಮೂಲಕ ಹೆಚ್ಚುವರಿ, ಕಡಿಮೆ ಅಥವಾ ಅಸಮಂಜಸವಾಗಿ ಕೂಲಿ ಪಾವತಿಸುವುದು ದೇಶದ ರಾಷ್ಟ್ರಿಯ ಅಭಿವೃದ್ಧಿ ಉದ್ದೇಶಗಳಿಗೆ – ಸಾಮಾಜಿಕ ಮತ್ತು ಆರ್ಥಿಕ – ಅಡ್ಡಿಯಾಗುವುದನ್ನು ತಪ್ಪಿಸುವುದಾಗಿದೆ[(೫)]. ಕೆ. ಎನ್. ಸುಬ್ರಮಣ್ಯ. ಸಾಮಾನ್ಯವಾಗಿ ಕಾರ್ಮಿಕರನ್ನು ಪರಿಣತಿ ಹೊಂದಿದ ಮತ್ತು ಪರಿಣತಿ ಹೊಂದಿರದ ಕಾರ್ಮಿಕರೆಂದು ವರ್ಗಿಕರಿಸುತ್ತೇವೆ. ಪರಿಣತಿ ಹೊಂದಿರದ ಕಾರ್ಮಿಕರು ಅಸಂಘಟಿತರಾಗಿದ್ದಾರೆ. ಪರಿಣತಿ ಹೊಂದಿದ ಕಾರ್ಮಿಕರು ಸಂಘಟಿತ ಮತ್ತು ಅಸಂಘಟಿತ ಸ್ವರೂಪ ಹೊಂದಿರುವುದನ್ನು ಭಾರತದಾದ್ಯಂತ ನಾವು ಕಾಣುತ್ತೇವೆ. ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಇಲ್ಲಿ ಸಂಘಟಿತ ವರ್ಗದ ಕಾರ್ಮಿಕರು ಅಸಂಘಟಿತ ವರ್ಗದ ಕಾರ್ಮಿಕರಿಗಿಂತ ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಅಸಂಘಟಿತ ವಲಯದ ಕಾರ್ಮಿಕರ ಸಂಖ್ಯೆಯಲ್ಲಿ ಘಣನೀಯ ಪ್ರಮಾಣದಲ್ಲಿರುವುದರಿಂದ ನಮಗೆ ಅಸಂಘಟತ ವಲಯದ ಬಗ್ಗೆ ಅದರ ಉಗಮ, ಪ್ರಾಮುಖ್ಯತೆ, ಗುಣಲಕ್ಷಣಗಳು, ಕೊಡುಗೆ ಸಮಸ್ಯೆಗಳು ಅಸಂಘಟಿತ ಮತ್ತು ಸಂಘಟಿತ ವಲಯದ ವ್ಯತ್ಯಾಸಗಳನ್ನು ಈ ಅಧ್ಯಯನದಲ್ಲಿ ನಾವು ತಿಳಿಯೋಣ.

## ೨.೨ ಅಸಂಘಟಿತ ವಲಯದ ಉಗಮದ ಕಾರಣಗಳು

೧೯೫೦ರ ಮಧ್ಯಭಾಗದಲ್ಲಿ ಡಬ್ಲ್ಯು. ಆರ್ಥರ್ ಲೀವಿಸ್‌ನ ಸಿದ್ಧಾಂತದ ಪ್ರಕಾರ ಅತ್ಯಂತ ಅಭಿವೃದ್ಧಿಯನ್ನು ಹೊಂದುತಿರುವ ದೇಶದಲ್ಲಿ ಕಾರ್ಮಿಕರ ಸಂಖ್ಯೆಯು ಅಧಿಕವಾಗಿರುತ್ತದೆಯಲ್ಲದೆ ಅದು ಕೈಗಾರಿಕೆಯ ಬೆಳವಣಿಗೆಗೆ ಪೂರಕವೂ ಆಗಿದೆ. ಇದರಿಂದ ಅಭಿವೃದ್ಧಿ ಹೊಂದಿದ ದೇಶಗಳು ಬೆಳೆಯಲು ಸಾಧ್ಯವಾಯಿತು ಎಂದು ತಿಳಿಸುತ್ತಾನೆ. ಆದುದರಿಂದ ಸಣ್ಣ ವ್ಯಾಪಾರಿಗಳು, ಸಣ್ಣ ಉತ್ಪಾದಕರು ಮತ್ತು ಸಾಂದರ್ಭಿಕ ಉದ್ಯೋಗಗಳನ್ನು ಒಳಗೊಂಡಿರುವ ಸಾಂಪ್ರದಾಯಿಕ ಕ್ಷೇತ್ರದಲ್ಲಿ ಅಂತಿಮವಾಗಿ ಆರ್ಥಿಕವಾಗಿ ಲೀನವಾಯಿತು ಹಾಗು ಮರೆಯಾಗುತ್ತದೆ ಎಂದು ಒಪ್ಪಿಕೊಳ್ಳಲಾಯಿತು. ಈ ವಾದವನ್ನು ೧೯೭೦ರಲ್ಲಿ ಕಡೆಗಣಿಸಲಾಯಿತು ಯಾಕೆಂದರೆ ಒಂದು ಕೇಸ್ ಸ್ಟಡಿಯಲ್ಲಿ ಅಸಂಘಟಿತ ವಲಯದ ಪ್ರಪಂಚದ ವಿವಿಧ ಭಾಗಗಳಲ್ಲಿ ಪುರುಷರು,

ಮಹಿಳೆಯರು ಮತ್ತು ಮಕ್ಕಳೂ ಸಕ್ರಿಯವಾಗಿ ಭಾಗವಹಿಸುವುದನ್ನು ಮತ್ತು ತಮ್ಮ ಅಸ್ತಿತ್ವವನ್ನು ಬಹಿರಂಗಪಡಿಸುವಲ್ಲಿ ಕಾರಣವಾಯಿತು. ಕೆಲವು ಅಧ್ಯಯನಗಳ ಪ್ರಕಾರ ಸಂಘಟಿತ ವಲಯವನ್ನು ಬಿಟ್ಟು ಬೇರೆ ಕ್ಷೇತ್ರದಲ್ಲಿ ದುಡಿಯುತ್ತಿದ್ದ ಕಾರ್ಮಿಕರು ತಮ್ಮ ಹೊಟ್ಟೆಪಾಡಿಗೆ ಬಹಳ ಕಷ್ಟ ಅನುಭವಿಸಬೇಕಾಯಿತಂತೆ. ಇದರಿಂದ ಸಂಘಟಿತ ಮತ್ತು ಅಸಂಘಟಿತವನ್ನು ಎರಡು ದ್ವಂದ್ವಗಳಾಗಿ ಬದಲಾಯಿಸಲು ಸಾಧ್ಯವಾಯಿತು. ವಸಾಹತುಶಾಯಿ ಯುಗದಲ್ಲಿ ಆಕ್ರಮಣಶೀಲ ಪಶ್ಚಿಮ ಬಂಡವಾಳಶಾಹಿ ವಲಯ ಮತ್ತು ಎದುರಾಳಿ ಪೂರ್ವ ಬಂಡವಾಳಶಾಹಿ ವಲಯ ಅಲ್ಲದೆ ಜನರ ನಡುವೆ ಒಂದು ವ್ಯತ್ಯಾಸವನ್ನು ನಿರ್ಮಿಸಲಾಯಿತು. ನಂತರದ ವಸಾಹತುಶಾಹಿ ಯುಗದಲ್ಲಿ ಈ ದ್ವಂದ್ವಗಳನ್ನು ಸಾಂಪ್ರದಾಯಿಕ ಮತ್ತು ಆಧುನಿಕ ಎಂದು ಅನ್ವಯಿಸಲಾಯಿತು. ಅದರ ಪ್ರಕಾರ ಗ್ರಾಮದಲ್ಲಿ ದುಡಿಯುವ ಕೃಷಿಕರನ್ನು ಪೂರ್ವ ಬಂಡವಾಳಶಾಹಿ ಎಂದು ಮತ್ತು ನಗರದಲ್ಲಿ ದುಡಿಯುವ ಕಾರ್ಮಿಕರನ್ನು ಕೈಗಾರಿಕಾ ಆರ್ಥಿಕ ಬಂಡವಾಳಶಾಹಿ ಎಂದು ವಿವರಿಸಲಾಗಿತ್ತು. ಇತ್ತೀಚಿನ ದ್ವಂದ್ವನೀತಿಯ ಪ್ರಕಾರ ನಗರದಲ್ಲಿ ದುಡಿಯುವವರನ್ನು ಬಂಡವಾಳಶಾಹಿಯ ಭಾಗವೆಂದು ದೃಢೀಕರಿಸಲಾಯಿತು. ಅದನ್ನು ಸಂಘಟಿತ ವಲಯವೆಂದು ಕರೆಯಲಾಯಿತು. ಉತ್ಪಾದನೆಯಲ್ಲಿ ಯಾವುದು ಕಡಿಮೆ ಆರ್ಥಿಕತೆಯನ್ನು ತೋರಿಸಿತೋ ಅದು ಅಸಂಘಟಿತ ವಲಯವೆಂದು ಸೂಚಿಸಲಾಯಿತು.

ಈ ಎರಡು ಪದಗಳ ವ್ಯತ್ಯಾಸವನ್ನು ಮಾಡುವಾಗ ಎರಡರಲ್ಲಿ ನಿರ್ದಿಷ್ಟವಾದ ಗುಣಲಕ್ಷಣಗಳನ್ನು ಗಮನಿಸಲಾಯಿತು. ಉದಾಹರಣೆಗೆ ಸಂಘಟಿತ ವಲಯದಲ್ಲಿ ಕಂಡುಬರುವ ಅಂಶಗಳು ಅಸಂಘಟಿತ ವಲಯದಲ್ಲಿ ಕಾಣಸಿಗುವುದಿಲ್ಲ. ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಅಸಂಘಟಿತ ವಲಯದಲ್ಲಿ ದುಡಿಯುವವರು ಕಡಿಮೆ ವೇತನ, ಕಳಪೆ ನುರಿತ, ಮತ್ತು ನೋಂದಾಯಿತರಲ್ಲದವರಾಗಿರುತ್ತಾರೆ. ಈ ಅಸ್ತವ್ಯಸ್ತವಾಗಿದ್ದ ಪದವನ್ನು ಸ್ಪಷ್ಟತೆಯನ್ನಾಗಿ ಮಾಡಿದವರು ಕೀತ್ ಹಾರ್ಟ್ ೧೯೭೧ ರಲ್ಲಿ

## ೨.೩ ಅಸಂಘಟಿತ ವಲಯದ ಪ್ರಾಮುಖ್ಯ ಮತ್ತು ಗುಣಲಕ್ಷಣಗಳು

ಅಸಂಘಟಿತ ವಲಯವು ಈ ಆಧುನಿಕ ಯುಗದಲ್ಲಿ ಬಹಳ ಪ್ರಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ ಯಾಕೆಂದರೆ ದೇಶದ ಅಭಿವೃದ್ಧಿಯಲ್ಲಿ ಜನ ಸಂಖ್ಯೆಯ ಪಾತ್ರವು ಬಹಳ ಮುಖ್ಯವಾದುದು ಪ್ರತಿಯೊಬ್ಬ ವ್ಯಕ್ತಿ ಅನುಕೂಲಕ್ಥನಾಗಿರುವುದಿಲ್ಲ. ಅನುಕೂಲಸ್ಥರಾದವರು ಅಂದರೆ ಶ್ರೀಮಂತರು, ವಿದ್ಯಾವಂತರು ಅವರು ತಮ್ಮ ಜೀವನದ ಮಟ್ಟವನ್ನು ಸಾಂಸ್ಥಿಕವಾಗಿ ರಚಿಸಿಕೊಂಡಿರುತ್ತಾರೆ. ಆದರೆ ನಮ್ಮ ದೇಶ ಬಡಜನರಿಂದ ಕೂಡಿದೆ. ಅವರು

ಅವಿಧ್ಯಾವಂತರಾಗಿದ್ದಾರೆ. ಇಂತವರು ತಮ್ಮ ಜೀವನದ ಅಗತ್ಯತೆಗಳನ್ನು ಈಡೇರಿಸಲು ಅಸಂಘಟಿತ ವಲಯವು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಅಸಂಘಟಿತ ವಲಯದ ಪ್ರಾಮುಖ್ಯತೆಯನ್ನು ಕೆಳಗೆ ವಿವರಿಸಲಾಗಿದೆ. ಆರ್ಥಿಕ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯವು ಬಹು ಮುಖ್ಯ ಪಾತ್ರ ವಹಿಸಿದೆ. ಅದರಲ್ಲಿಯೂ ಅಭಿವೃದ್ಧಿ ಹೊಂದುತ್ತಿರುವ ದೇಶದ ೧/೩ ಆದಾಯವು ಈ ಅಸಂಘಟಿತ ವಲಯದಿಂದಲೇ ಬರುತ್ತಿದೆ. ಅಸಂಘಟಿತ ವಲಯದಿಂದ ನಿರುದ್ಯೋಗ ಸಮಸ್ಯೆಯು ಕಡಿಮೆಯಾಗಿದೆ. ಇದರಲ್ಲಿ ಮಾಲಿಕರು ಲಾಭಕ್ಕಿಂತ ತಮ್ಮ ಜೀವನಕ್ಕೆ ಬೇಕಾದ ಅಗತ್ಯತೆಗಳ ಬಗ್ಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಉದಾಹರಣೆಗೆ ಮಕ್ಕಳ ವಿದ್ಯಾಭ್ಯಾಸಕ್ಕೆ, ಕೌಟುಂಬಿಕ ಸಮಸ್ಯೆಗಳಿಗೆ.

ಇಲ್ಲಿ ಸಂಘಟಿತ ವಲಯ ಸುಮಾರು ೧೨-೧೪ ಶೇಕಡಾ ವಾರ್ಷಿಕ ಆದಾಯವನ್ನು ಕೊಟ್ಟರೆ ಅಸಂಘಟಿತ ವಲಯವು ೩೦ ಶೇಕಡಾ ವಾರ್ಷಿಕ ಆದಾಯವನ್ನು ಕೊಡುತ್ತದೆ. NSS ಸರ್ವೆ ೧೯೯೯-೨೦೦೦ರ ಪ್ರಕಾರ ನಮ್ಮ ದೇಶದಲ್ಲಿ ೩೭೦ ಮಿಲಿಯನ್ ಕಾರ್ಮಿಕರು (೯೨%) ಈ ಅಸಂಘಟಿತ ವಲಯದಲ್ಲಿ ದುಡಿಯುತ್ತಾರೆ. ಈ ವಲಯವು ಪ್ರಾಮುಖ್ಯವನ್ನು ಪಡೆಯಲು ಕಾರಣವೇನೆಂದರೆ ಉದ್ಯೋಗಾವಕಾಶಗಳನ್ನು ಸಾಕಷ್ಟು ಜನರಿಗೆ ದೇಶದಲ್ಲಿ ಒದಗಿಸುವ ಮೂಲಕ ಮತ್ತು ರಾಷ್ಟ್ರಿಯ ಉತ್ಪಾದನೆಯಲ್ಲಿ ಮಹತ್ವದ ಕಾರ್ಯವನ್ನು ಮಾಡುತ್ತಿದೆ. ಅಸಂಘಟಿತ ವಲಯದ ಕೊಡುಗೆಯು ನೆಟ್ ಡೊಮೆಸ್ಟಿಕ್ ಪ್ರೊಡಕ್ಟ್ ಮತ್ತು ಅದರ ಪಾಲು ಒಟ್ಟು NDP ಯ ಪ್ರಸ್ತುತ ಬೆಲೆಯ ೬೦% ಕ್ಕಿಂತ ಅಧಿಕವಾಗಿದೆ. ಇನ್ನೂ ಉಳಿತಾಯದಲ್ಲಿ ಅದರ ಪಾಲು ೩/೪ ಅಸಂಘಟಿತ ವಲಯದಿಂದ ಬರುತ್ತದೆ. ಸಮಾಜದ ರಾಷ್ಟ್ರದ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯವು ಬಹುಮುಖ್ಯ ಪಾತ್ರವನ್ನು ವಹಿಸಿದೆ. ಜನರಿಗೆ ಉದ್ಯೋಗವನ್ನು ಕಲ್ಪಿಸುವುದರಿಂದ ಅವರ ಜೀವನ ಮಟ್ಟವು ಉತ್ತಮವಾಗುತ್ತದೆ. ಇದರಿಂದ ರಾಷ್ಟ್ರದ ಆದಾಯ ಜಾಸ್ತಿಯಾಗಿ ಅಭಿವೃದ್ಧಿ ಸಾಧಿಸಲು ಸುಲಭವಾಗುತ್ತದೆ.

**ಅಸಂಘಟಿತ ವಲಯದ ಕೆಲವು ಗುಣಲಕ್ಷಣಗಳು**

- ಇಲ್ಲಿ ಕೆಲಸಕ್ಕೆ ಸುಲಭವಾಗಿ ಸೇರಲೂಬಹುದು ಮತ್ತು ಬಿಡಲೂಬಹುದು.
- ಹೂಡಿಕೆಯ ಪ್ರಮಾಣವು ತುಂಬಾ ಕಡಿಮೆಯಾಗಿರುತ್ತದೆ. ಇಲ್ಲಿ ಕಾರ್ಮಿಕರು ಮತ್ತು ಹೂಡಿಕೆಯ ನಡುವೆ ವ್ಯತ್ಯಾಸವಿರುವುದಿಲ್ಲ.
- ಯಾವುದೇ ರೀತಿಯ ಶಿಕ್ಷಣ ಅಥವಾ ತರಬೇತಿಯ ಅವಶ್ಯಕತೆಯು ಇರುವುದಿಲ್ಲ.

- ಮಾಲಿಕರ ಮತ್ತು ಕಾರ್ಮಿಕರ ಸಂಬಂಧವು ಲಿಖಿತರಹಿತ ಮತ್ತು ಅಸಂಘಟಿತ ಅಂದರೆ ಅಲ್ಲಿ ಯಾವುದೇ ಹಕ್ಕುಗಳು ಇರುವುದಿಲ್ಲ, ಉದಾಹರಣೆಗೆ, ಪಿ. ಎಫ್., ಇ. ಎಸ್. ಐ., ಇತ್ಯಾದಿ.
- ಕಾರ್ಮಿಕರಿಗೆ ಯಾವುದೇ ರೀತಿಯ ಹಕ್ಕುಗಳ ಬಗ್ಗೆ, ಸಂಘಟನೆಗಳ ಬಗ್ಗೆ ಮಾಹಿತಿ ಇರುವುದಿಲ್ಲ.
- ಕಡಿಮೆ ವೇತನ ಸಂಘಟಿತ ವಲಯದ ಕಾರ್ಮಿಕರಿಗೆ ಹೋಲಿಸಿದಾಗ ತೀರಾ ಕಡಿಮೆ ವೇತನವನ್ನು ಪಡೆಯುತ್ತಾರೆ.
- ಈ ವಲಯದಲ್ಲಿ ದುಡಿಯುವವರು ಕಾಯಿಲೆ ಅಪಘಾತ, ಯಾವುದೇ ರಕ್ಷಣೆ ಇಲ್ಲದೆ ದುಡಿಯಬೇಕು.
- ಅಸಂಘಟಿತ ವಲಯದಲ್ಲಿ ಯಾವುದೇ ರೀತಿಯ ಉದ್ಯೋಗದ ಭರವಸೆ ಇರುವುದಿಲ್ಲ.
- ಅಸಂಘಟಿತ ವಲಯವು ಹಲವು ಕ್ಷೇತ್ರಗಳಲ್ಲಿ ಇರುವುದರಿಂದ ತಮ್ಮೊಳಗೆ ತೀವ್ರ ಸ್ಪರ್ಧೆಯನ್ನು ಎದುರಿಸುತ್ತಾರೆ.

## ೨.೪ ಅಸಂಘಟಿತ ವಲಯದ ಕೊಡುಗೆಗಳು

ಅಸಂಘಟಿತ ವಲಯದ ಕೊಡುಗೆಯ ಶೇಕಡಾ ೫೬.೭ ೨೦೦೨-೦೩ ರ NDP ಕ್ಷೇತ್ರದಲ್ಲಿತ್ತು. ಇದು ಸಾಬೀತುಪಡಿಸುವುದೇನೆಂದರೆ ಬಹು ಪ್ರಮಾಣದ ಉತ್ಪಾದನೆಯು ಅಸಂಘಟಿತ ವಲಯದಿಂದಲೇ ಬರುತ್ತಿದೆ. ಇದನ್ನು ಚಿತ್ರದ ಮುಖಾಂತರ ತಿಳಿಯೋಣ.

**ವಲಯಗಳ ಒಟ್ಟು ಡೊಮೆಸ್ಟಿಕ್ ಉತ್ಪಾದನೆ (೨೦೦೨-೦೩)**




ಮೂಲ: NAS ೨೦೦೫

ಇದನ್ನು ನಮ್ಮ ದೇಶದ ಮೂರು ಕಾರ್ಯಕ್ಷೇತ್ರಗಳಲ್ಲಿ ಹೀಗೆ ವಿಂಗಡಿಸಬಹುದು.




ಮೇಲಿನ ಚಿತ್ರಣದಲ್ಲಿ ನಮಗೆ ತಿಳಿಯುವುದೇನೆಂದರೆ ಕೃಷಿ ಚಟುವಟಿಕೆಯಲ್ಲಿ ಅಸಂಘಟಿತ ವಲಯವು ೯೬% ಕಾರ್ಮಿಕರನ್ನು ಹೊಂದಿದ್ದರೆ ಸಂಘಟಿತ ಕಾರ್ಮಿಕರು ಕೇವಲ ೪%. ಕೈಗಾರಿಕಾ ಕ್ಷೇತ್ರದಲ್ಲಿ ೬೦% NDP ಯ ಪಾಲು ಸಂಘಟಿತ ವಲಯಕ್ಕೆ ಸೇರಿದರೆ ೪೦% ಅಸಂಘಟಿತ ವಲಯದ್ದಾಗಿದೆ. ಮೂಲ ಸೌಕರ್ಯ ಕ್ಷೇತ್ರದಲ್ಲಿ ೫೩% ಸಂಘಟಿತ ವಲಯದ್ದಾದರೆ ೪೭% ಅಸಂಘಟಿತ ವಲಯದ ಕೊಡುಗೆಯಾಗಿದೆ.

**ಕಾರ್ಯಕ್ಷೇತ್ರಗಳ ಪ್ರಕಾರ ವಿವಿಧ ಕೈಗಾರಿಕೆಗಳ ಹಂಚುವಿಕೆ (೨೦೦೨-೦೩)**

| ಕೈಗಾರಿಕೆಗಳು | ಅಸಂಘಟಿತ ವಲಯ (% ಎನ್. ಡಿ. ಪಿ.) | ಸಂಘಟಿತ ವಲಯ (% ಎನ್. ಡಿ. ಪಿ.) | ಒಟ್ಟು |
|---|---|---|---|
| ಕೃಷಿ, ಅರಣ್ಯ, ಮೀನುಗಾರಿಕೆ | ೯೫.೯ | ೪.೧ | ೧೦೦.೦ |
| ಗಣಿಗಾರಿಕೆ, ವಿದ್ಯುತ್ ಮತ್ತು ಕನ್‌ಸ್ಟ್ರಕ್ಷನ್ | ೩೯.೫ | ೬೦.೫ | ೧೦೦.೦ |
| ಸೇವಾ ವಲಯ | ೪೬.೯ | ೫೩.೧ | ೧೦೦.೦ |
| ಒಟ್ಟು | ೫೬.೭ | ೪೩.೩ | ೧೦೦.೦ |

ಮೂಲ: NAS ೨೦೦೫

**ಕೃಷಿಯೇತರ ಅಸಂಘಟಿತ ವಲಯದ ಸ್ಥಿತಿಗತಿ**

ಕೇವಲ ೧೨% ಉದ್ಯಮಾಧಿಪತಿಗಳು ಗ್ರಾಮೀಣ ಪ್ರದೇಶದಲ್ಲಿ ನೋಂದಾವಣಾ ಕಛೇರಿಯ ಮುಖಾಂತರ ನೋಂದಾಯಿಸಿಕೊಂಡಿದ್ದಾರೆ. ಆದರೆ ನಗರಗಳಲ್ಲಿ ೩೧% ಸ್ವಲ್ಪ ಅಧಿಕ ಪ್ರಮಾಣದಲ್ಲಿದೆ.

| | ಉದ್ಯಮಗಳ ಶೇಕಡಾವಾರು ಪಾಲು | | |
|---|---|---|---|
| | ಗ್ರಾಮೀಣ | ನಗರ | ಒಟ್ಟು |
| ನೋಂದಾಯಿಸಿಕೊಂಡವರು | ೧೧.೬ | ೩೧.೩ | ೨೦.೨ |
| ನೋಂದಾಯಿಸಿಕೊಳ್ಳದೇ ಇರುವವರು | ೮೪.೪ | ೬೮.೭ | ೭೯.೮ |
| ಒಟ್ಟು | ೧೦೦.೦ | ೧೦೦.೦ | ೧೦೦.೦ |

ಆಧಾರ: ಅಸಂಘಟಿತ ವಲಯದ ಕೃಷಿಯೇತರ ಉದ್ಯಮಗಳ ಬಗ್ಗೆ ಎನ್. ಎಸ್. ಎಸ್. ನ ಐವತ್ತೈದನೇ ವರದಿ, ೧೯೯೯–೨೦೦೦

ಈ ಮೇಲಿನ ಕೋಷ್ಟಕದಿಂದ ತಿಳಿಯುವುದೇನೆಂದರೆ ಅಸಂಘಟಿತ ವಲಯವು ವಿದ್ಯಾವಂತರು ಮತ್ತು ಅವಿದ್ಯಾವಂತರಿಗೂ ಎಲ್ಲಾ ಕ್ಷೇತ್ರಗಳಲ್ಲಿ ಉದ್ಯೋಗವನ್ನು ಕಲ್ಪಿಸಿ ಕೊಟ್ಟಿದೆ ಮತ್ತು ಸಂಘಟಿತ ವಲಯದ ಕೊಡುಗೆಗಿಂತ ಅಸಂಘಟಿತ ವಲಯದ ಕೊಡುಗೆ ಹೆಚ್ಚು ಎಂದು ಕಾಣಿಸುತ್ತದೆ.

**೨.೫ ಅಸಂಘಟಿತ ವಲಯದ ಸಮಸ್ಯೆಗಳು**

ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಿಗೆ ಹೆಚ್ಚು ರಕ್ಷಣೆಯಿಲ್ಲ. ಈ ಕಾರ್ಮಿಕರು ಹತ್ತು ಹಲವು ಸಲ ವಿವಿಧ ಶೋಷಣೆಗಳಿಗೆ ಗುರಿಯಾಗುತ್ತಾರೆ. ಈ ಸತ್ಯವು ಕೆಳಕಂಡ ಸಂಗತಿಗಳಿಂದ ಸ್ಪಷ್ಟಗೊಳ್ಳುವುದು;

- ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕರಿಗೆ ವೃತ್ತಿ ಭದ್ರತೆಯಿಲ್ಲ. ಕೂಲಿ ವ್ಯತ್ಯಯಗಳಿವೆ, ಯಾಕೆಂದರೆ ಅಸಂಘಟಿತ ಕ್ಷೇತ್ರದ ಉದ್ಯಮಗಳು ಲಿಂಗ ತಾರತಮ್ಯವನ್ನು ವ್ಯಾಪಕವಾಗಿ ಅನುಸರಿಸುತ್ತವೆ.

- ಸರಕಾರದ ಕನಿಷ್ಠ ಕೂಲಿ ಕಾಯಿದೆ, ಮಾತೃತ್ವ ಸಂರಕ್ಷಣೆ ಕಾಯಿದೆ ಅಸಂಘಟಿತ ಕ್ಷೇತ್ರದಲ್ಲಿ ಜಾರಿಗೊಳ್ಳುತ್ತಿಲ್ಲ. ಈ ಕಾಯಿದೆಗಳನ್ನು ಉದ್ಯಮಗಳು ಸಂಪೂರ್ಣವಾಗಿ ಉಲ್ಲಂಘಿಸುತ್ತಿದ್ದರೂ ಕಾರ್ಮಿಕ ಕಲ್ಯಾಣ ಇಲಾಖೆ ಯಾವುದೇ ಕ್ರಮ ಕೈಗೊಳ್ಳುತ್ತಿಲ್ಲ.

- ಅಸಂಘಟಿತ ವಲಯದ ಕಾರ್ಮಿಕರಿಗೆ ಬೋನಸ್, ರಜೆಗಳು, ರಜೆ ನಗದೀಕರಣ, ವೈದ್ಯಕೀಯ ಸೌಲಭ್ಯ, ಕಡಿಮೆ ಬೆಲೆಗೆ ಆಹಾರ ಸೌಲಭ್ಯ ಇತ್ಯಾದಿ ಹೆಚ್ಚುವರಿ ಸೌಲಭ್ಯಗಳನ್ನು ನೀಡಲಾಗುತ್ತಿಲ್ಲ.

- ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವವರು ಆರ್ಥಿಕ ಶೋಷಣೆಗೆ ಒಳಗಾಗಲು ಒಂದು ಕಾರಣವಿದೆ. ಅದೆಂದರೆ ಈ ಕ್ಷೇತ್ರದ ಉದ್ದಿಮೆಗಳು ಅತಿ ಸಣ್ಣ ವೈಯಕ್ತಿಕ ಮಾಲಿಕತ್ವದ, ಆರ್ಥಿಕವಾಗಿ ದುರ್ಬಲವಾದ ಘಟಕಗಳಾಗಿವೆ. ಹೀಗಾಗಿ ಅವುಗಳ ಮಾಲಿಕರು ಕಾರ್ಮಿಕರಿಗೆ ಸರಕಾರ ನಿಗದಿಪಡಿಸಿದ ಕೂಲಿಗಳನ್ನು, ಇತರ ಕಲ್ಯಾಣ ಸೌಲಭ್ಯಗಳನ್ನು ನೀಡುತ್ತಿಲ್ಲ.

- ಅಸಂಘಟಿತ ಕ್ಷೇತ್ರಗಳ ಉದ್ದಿಮೆಗಳಲ್ಲಿ ದುಡಿಯುವ ಕಾರ್ಮಿಕರು ಸಾಮಾನ್ಯವಾಗಿ ಅಶಿಕ್ಷಿತರು. ಇವರಿಗೆ ಕಾರ್ಮಿಕ ಸುರಕ್ಷೆ ಮತ್ತು ಕಲ್ಯಾಣ ಕಾನೂನುಗಳ ಸ್ಪಷ್ಟ ಅರಿವಿಲ್ಲ. ಆದುದರಿಂದ ಅವಿದ್ಯಾವಂತ ಕಾರ್ಮಿಕರನ್ನು ಶೋಷಿಸುವುದು ಸುಲಭದ ಕೆಲಸವಾಗಿದೆ.

- ಅಸಂಘಟಿತ ವಲಯದಲ್ಲಿ ಕಾರ್ಮಿಕರಿಗೆ ಸಂಘ ರಚಿಸುವ, ಅವುಗಳ ಸದಸ್ಯರಾಗುವ, ಮುಷ್ಕರ ನಡೆಸಲು ಸಾಧ್ಯವಾಗುತ್ತಿಲ್ಲ. ಹಾಗೇನಾದರೂ ಮಾಡಿದರೆ ಉದ್ಯಮಶೀಲನಿಗೆ ಅವರನ್ನು ಕೆಲಸದಿಂದ ತೆಗೆದುಹಾಕುವ ಸಾಮರ್ಥ್ಯವಿರುತ್ತದೆ. ಕಾರ್ಮಿಕರು ತಮ್ಮ ಹೊಟ್ಟೆಪಾಡಿಗಾಗಿ ಇದೆಲ್ಲವನ್ನೂ ಸಹಿಸಿಕೊಂಡು ಹೋಗಬೇಕಾಗುತ್ತದೆ.

- ಅಸಂಘಟಿತ ಕ್ಷೇತ್ರದ ಉದ್ಯಮಗಳಲ್ಲಿ ದುಡಿಯುವ ಮಹಿಳೆಯರ ಮೇಲೆ ವಿಭಿನ್ನ ಬಗೆಯ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆದಿವೆ, ನಡೆಯುತ್ತಿವೆ. ಇಂಥ ಪ್ರಯತ್ನಗಳು ಸಹೋದ್ಯೋಗಿ ಪುರುಷ ಕಾರ್ಮಿಕರಿಂದ ಅಥವಾ ಮಾಲಿಕರಿಂದ

ಉಂಟಾಗುತ್ತವೆ. ಮಹಿಳಾ ಕಾರ್ಮಿಕರ ವಿರುದ್ಧ ನಡೆಯುವ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರಗಳ ಪ್ರಕರಣಗಳು ದಾಖಲಾಗುವುದಿಲ್ಲ, ಬೆಳಕಿಗೆ ಬರುವುದಿಲ್ಲ. ಏಕೆಂದರೆ ಬಡ ಮಹಿಳೆಯರು ಮಾನ ಮರ್ಯಾದೆಗೆ ಅಂಜಿಕೊಂಡು, ವಿವಾಹದ ಭದ್ರತೆ/ಸ್ಥಿರತೆ ಕಾಯ್ದುಕೊಳ್ಳಲು ತಮ್ಮ ವಿರುದ್ಧದ ಲೈಂಗಿಕ ಅತ್ಯಾಚಾರಗಳ ಬಗ್ಗೆ ಪೋಲೀಸರಿಗೆ ದೂರು ಕೊಡುವುದಿಲ್ಲ. ಇದು ಬಡ ಅನಕ್ಷರಸ್ಥ ಮಹಿಳೆಯರ ವಿರುದ್ಧ ನಡೆಯುವ ಅಮಾನವೀಯ ಕ್ರೂರ ಹೇಯ ಕೃತ್ಯಗಳಾಗಿವೆ. ಈ ಲೈಂಗಿಕ ದೌರ್ಜನ್ಯದಿಂದ ಮಹಿಳಾ ಕಾರ್ಮಿಕರು ಸಂರಕ್ಷಣೆ ಪಡೆಯಲು ವಿಫಲರಾಗಿದ್ದಾರೆ.

- ಅಸಂಘಟಿತ ವಲಯದ ಕಾರ್ಮಿಕರು ಅವಿದ್ಯಾವಂತರಾದ ಕಾರಣ ಅವರು ಯಾವುದೇ ರೀತಿಯ ಕಾರ್ಯ ಕೌಶಲ್ಯವನ್ನು ಸರಿಯಾಗಿ ಹೊಂದಿರುವುದಿಲ್ಲ. ಇವರಿಗೆ ಯಾವುದೇ ರೀತಿಯ ಶಿಕ್ಷಣ ಅಥವಾ ತರಬೇತಿಯನ್ನು ಕೊಡಲಾಗಿರುವುದಿಲ್ಲ. ಆದುದರಿಂದ ಅವರು ಕಡಿಮೆ ಕೌಶಲ್ಯತೆಯನ್ನು ಹೊಂದಿರುವ ಕಾರ್ಮಿಕರು ಎಂದು ಪರಿಗಣಿಸಲಾಗುತ್ತದೆ.

- ಅಸಂಘಟಿತ ವಲಯದ ಕಾರ್ಮಿಕರು ಯಾವುದೇ ಕೆಲಸವನ್ನು ದೀರ್ಘಕಾಲದವರೆಗೆ ಮಾಡುವುದಿಲ್ಲ ಎಂದರೆ ಅವರಿಗೆ ಒಂದೇ ಕೆಲಸವು ಖಾಯಂ ಆಗಿರುವುದಿಲ್ಲ. ಅವರು ವೃತ್ತಿಯನ್ನು ಆಗಾಗ ಬದಲಾಯಿಸುತ್ತಿರುತ್ತಾರೆ. ಇದರಿಂದ ಅವರಲ್ಲಿ ಸ್ಥಿರತೆಯ ಕೊರತೆಯನ್ನು ಕಾಣಬಹುದು.

- ಅಸಂಘಟಿತ ವಲಯದ ಕಾರ್ಮಿಕರ ವೇತನವು ನಿಗದಿತವಾಗಿ ಬಹಳ ಕಡಿಮೆಯಾಗಿರುತ್ತದೆ. ಇದರಿಂದ ಅವರು ಕೇವಲ ದೈನಂದಿನ ಖರ್ಚುವೆಚ್ಚಗಳ ಬಗ್ಗೆ ಮಾತ್ರ ಚಿಂತಿಸುತ್ತಿರುತ್ತಾರೆ. ಅವರಲ್ಲಿ ಹೂಡಿಕೆಯು ಇರುವುದಿಲ್ಲ. ಅದನ್ನು ಕೇವಲ ತಮ್ಮ ವೈಯಕ್ತಿಕ ಸಮಸ್ಯೆಗಳಿಗೆ ಮಾತ್ರ ಉಪಯೋಗಿಸಲು ಅವರಿಗೆ ಅವಕಾಶವಿರುತ್ತದೆ.

- ಅಸಂಘಟಿತ ವಲಯದ ಕಾರ್ಮಿಕರ ಆಧಾಯವು ಸೀಮಿತವಾಗಿರುವುದರಿಂದ ದುಬಾರಿ ಮನೆ ಬಾಡಿಗೆ ನೀಡಿ ವಾಸಿಸಲು ಸಾಧ್ಯವಾಗುವುದಿಲ್ಲ. ಮೂಲ ಸೌಕರ್ಯಗಳಿಲ್ಲದ ವಸತಿಗಳಲ್ಲಿ ವಾಸಿಸುತ್ತಿದ್ದಾರೆ. ನೀರಿನ ಪೂರೈಕೆ ನೈರ್ಮಲ್ಯವಿಲ್ಲದ ಪರಿಸರದಲ್ಲಿ ವಾಸಿಸುವ ಅನಿವಾರ್ಯತೆ ಇವರಿಗೆ ಏರ್ಪಟ್ಟಿದೆ. ಆದುದರಿಂದ ಅನಾರೋಗ್ಯಗಳಿಗೆ ಒಳಗಾಗುವ ಸಂಭವಗಳು ಹೆಚ್ಚಾಗಿರುತ್ತದೆ.

- ಅಸಂಘಟಿತ ಕಾರ್ಮಿಕರಿಗೆ ಜೀವನ ನಿರ್ವಹಣೆಯು ಕಷ್ಟವಾಗಿರುವುದರಿಂದ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ನೀಡಲು ವಿಫಲರಾಗಿರುತ್ತಾರೆ. ಮಕ್ಕಳ ಮೇಲ್ವಿಚಾರಣೆ ಮತ್ತು ವಿದ್ಯಾಬ್ಯಾಸದ ಕುರಿತು ಗಮನ ನೀಡಲು ಪೋಷಕರು ಅಸಮರ್ಥರಾಗಿತ್ತಾರೆ. ಕಾನೂನು ಬಾಹಿರ ಚಟುವಟಿಕೆಯನ್ನು ತೊಡಗಿರುವ ವ್ಯಕ್ತಿಗಳು ಇಂತಹ ಮಕ್ಕಳನ್ನು ದುರುಪಯೋಗ ಪಡಿಸಿಕೊಂಡು ಸಮಾಜ ಬಾಹಿರ ಚಟುವಟಿಕೆಯನ್ನು ತೊಡಗುವಂತೆ ಮಾಡುತ್ತಾರೆ.

- ಅಸಂಘಟಿತ ವರ್ಗದ ಮಹಿಳೆಯರು ಕೆಲವು ಸಂಧರ್ಭದಲ್ಲಿ ಉದ್ಯೋಗದಾತರ ಶೋಷಣೆ ಮತ್ತು ಸಹಕಾರ್ಮಿಕರಿಂದ ಹಾಗೂ ಉದ್ಯೋಗದಾತರ ಒತ್ತಡದಿಂಡ ಅನೈತಕ ಪಥವನ್ನು ತುಳಿಯಬೇಕಾದ ಸನ್ನಿವೇಶಗಳು ಏರ್ಪಡುತ್ತವೆ.

- ಪೋಷಕರ ಆದಾಯದಿಂದ ಕುಟುಂಬದ ನಿರ್ವಹಣೆ ಅಸಾಧ್ಯವಾದತಂಹ ಸನ್ನಿವೇಶಗಳಲ್ಲಿ ಷೋಷಕರೆ ತಮ್ಮ ಮಕ್ಕಳನ್ನು ಹೋಟೆಲ್‌ಗಳಲ್ಲಿ ಅಂಗಡಿಗಳ ಕೆಲಸದಲ್ಲಿ ತೊಡಗಿಸುತ್ತಾರೆ. ಇದ ವಿದ್ಯಾಭ್ಯಾಸ ಪಡೆಯಬೇಕಾದ ಮಕ್ಕಳು ಪೋಷಕರ ದುಸ್ಥಿತಿಯಿಂದ ದುಡಿತದಲ್ಲಿ ತೊಡಗಲು ಕಾರಣವಾಗಿದೆ.

ಈ ಎಲ್ಲಾ ವಿಷಯಗಳಿಂದ ತಿಳಿಯುವುದೇನೆಂದರೆ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರ ಸ್ಥಿತಿಗತಿ ಅಷ್ಟೇನೂ ಉತ್ತಮವಾಗಿಲ್ಲ. ಇಂಥ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕರ ಹಿತಾಸಕ್ತಿಗಳಿಗೆ ವಿರೋಧವಾಗಿದೆ. ಇಲ್ಲಿ ಕಾರ್ಮಿಕರನ್ನು ಅನೇಕ ವಿಧಗಳಲ್ಲಿ ಶೋಷಿಸಲಾಗುತ್ತದೆ. ಈ ವಿಶ್ಲೇಷಣೆಯು ಭಾರತಕ್ಕೆ ಸ್ಪಷ್ಟವಾಗಿ ಅನ್ವಯಿಸುತ್ತದೆ. ಅಸಂಘಟಿತ ವಲಯದ ಪರವಾಗಿ ಕಾನೂನುಗಳಿವೆ, ಸಂವಿಧಾನದಲ್ಲಿ ಕೆಲವು ಹಕ್ಕುಗಳನ್ನು ನೀಡಲಾಗಿದೆ ಎಂದು ಹೇಳಲಾಗುತ್ತದೆ. ಆದರೆ ಕೆಲವೇ ಕೆಲವು ಕನಿಷ್ಠ ಹಕ್ಕುಗಳನ್ನು ನೀಡಬೇಕೆಂದು ಕಾರ್ಮಿಕರು ಕೇಳಿದಾಗ ಅವರ ಪರವಾಗಿ ಇದೆ ಎಂದು ಹೇಳಲಾದ ಯಾವ ಕಾನೂನುಗಳೂ ಅವರ ಸಹಾಯಕ್ಕೆ ಬರುವುದಿಲ್ಲ. ಇಂದು ಈ ನಾಡಿನ ಅಸಂಘಟಿತ ಕಾರ್ಮಿಕರ ಸಂಕಷ್ಟವು ಭೀಕರವಾಗಿದೆ.

## ೨.೬ ಅಸಂಘಟಿತ ವಲಯ ಮತ್ತು ಸಂಘಟಿತ ವಲಯದ ವ್ಯತ್ಯಾಸಗಳು

ಭಾರತದಂಥ ವಿಕಾಸಶೀಲ ದೇಶಗಳಲ್ಲಿ ಕಾರ್ಮಿಕರ ಸ್ಥಿತಿಗತಿ ಅಷ್ಟೇನೂ ಉತ್ತಮವಾಗಿಲ್ಲ. ಈ ವಿಕಾಸಶೀಲ ದೇಶಗಳಲ್ಲಿ ಆರ್ಥಿಕತೆಯನ್ನು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆಂದು ಎಂದು ವರ್ಗೀಕರಿಸುವುದು ವಾಡಿಕೆ. ಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಗತಿ ಪರವಾಗಿಲ್ಲ ಆದರೆ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಯು ಹೀನಾಯವಾಗಿದೆ. ಅವರು ಅಪಾರವಾದ ಶೋಷಣೆಗೆ ಒಳಗಾಗಿದ್ದಾರೆ.

ಸಂಘಟಿತ ವಲಯದಲ್ಲಿ ಕಾರ್ಮಿಕರ ನೇಮಕಾತಿಯು ಕೆಲವು ನಿಯಮಗಳನ್ನು ಅನುಸರಿಸುತ್ತದೆ. ಅವರ ಅರ್ಹತೆ, ಶಿಕ್ಷಣವನ್ನೆಲ್ಲಾ ಗಮನಿಸಿ ಕಾರ್ಮಿಕರನ್ನು ನೇಮಕಾತಿ ಮಾಡಲಾಗುತ್ತದೆ. ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕರ ನೇಮಕಾತಿ ನಿಯಮಗಳನ್ನು ಅನುಸರಿಸುವುದಿಲ್ಲ.

ಸಂಘಟಿತ ಕ್ಷೇತ್ರವೆಂದರೆ ಸರಕಾರದ ಕೈಗಾರಿಕೆ ಮತ್ತು ಕಾರ್ಮಿಕ ಕಲ್ಯಾಣ ಇಲಾಖೆಯಲ್ಲಿ ನೋಂದಾಯಿಸಲ್ಪಟ್ಟ ಉದ್ಯಮಗಳೆಂದರ್ಥ. ಈ ಉದ್ಯಮ ಘಟಕಗಳು ಸರಕಾರಕ್ಕೆ ಕಾರ್ಪೊರೇಟ್ ಮತ್ತು ಮಾರಾಟ ತೆರೆಗೆಯನ್ನು ಪಾವತಿಸುತ್ತವೆ. ಕಾರ್ಮಿಕ ನೇಮಕಾತಿ ಮತ್ತು ಕಲ್ಯಾಣ ನೀತಿಗಳನ್ನು ಅನುಸರಿಸುವುವು ಇಂಥ ಯಾವುದೇ ಸರಕಾರಿ ಆರ್ಥಿಕ ನೀತಿ ನಿಯಮಾವಳಿಗಳನ್ನು ಅನುಸರಿಸದ ಸಣ್ಣ ಮತ್ತು ಅತಿ ಸಣ್ಣ ಉದ್ಯಮ ಘಟಕಗಳು ಸೇರಿ ಅಸಂಘಟಿತ ಅಥವಾ ಅನೌಪಚಾರಿಕ ಕ್ಷೇತ್ರವೆನಿಸುತ್ತದೆ.

ಸಂಘಟಿತ ಕ್ಷೇತ್ರದ ಉದ್ಯಮಗಳು ಸರಕಾರಕ್ಕೆ ತೆರಿಗೆಯನ್ನು ಕಡ್ಡಾಯವಾಗಿ ಕಟ್ಟುತ್ತವೆ. ಆದರೆ ಅಸಂಘಟಿತ ಕ್ಷೇತ್ರದ ಉದ್ಯಮಗಳು ಸರಕಾರಕ್ಕೆ ತೆರಿಗೆಯನ್ನು ಪಾವತಿಸುವುದಿಲ್ಲ.

ಸಂಘಟಿತ ವಲಯದಲ್ಲಿ ಉತ್ಪಾದಕರು ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುತ್ತಾರೆ. ಇದರಿಂದ ಕಾರ್ಮಿಕರ ಜೀವನವು ಉತ್ತಮವಾಗಿರುತ್ತದೆ. ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕ ಕೂಲಿ ಮತ್ತು ಇತರೆ ಪಾವತಿಗಳಿಗೆ ಸಂಬಂಧಿಸಿದಂತೆ ಅಸಂಘಟಿತ ಕ್ಷೇತ್ರದ ಉತ್ಪಾದಕರು ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುವುದಿಲ್ಲ.

ಸಂಘಟಿತ ವಲಯದಲ್ಲಿ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯು ಕಾರ್ಮಿಕರ ಹಿತರಕ್ಷಣೆಗಾಗಿ ರೂಪಿಸಿರುವ ಎಲ್ಲಾ ಕಾರ್ಮಿಕ ಮಾನದಂಡಗಳನ್ನೂ ಅದರ ಸದಸ್ಯ ದೇಶಗಳು ಕಾನೂನುಗಳನ್ನಾಗಿ ಪರಿವರ್ತಿಸುತ್ತವೆ (ಸಿಪಿ). ಆದ್ದರಿಂದ ಕಾರ್ಮಿಕರಿಗೆ ಸಂಘಟಿತ ಕ್ಷೇತ್ರಗಳಲ್ಲಿ ಅಪಾರವಾದ ರಕ್ಷಣೆಯಿದೆ. ಆದರೆ ಅಸಂಘಟಿತ ವಲಯದಲ್ಲಿ ಕಾರ್ಮಿಕರಿಗೆ ಯಾವುದೇ ರೀತಿಯ ರಕ್ಷಣೆಯಿರುವುದಿಲ್ಲ.

ಸಂಘಟಿತ ವಲಯದಲ್ಲಿ ಯಾವುದೇ ರೀತಿಯ ಲಿಂಗ ತಾರತಮ್ಯ ಮಾಡಲಾಗುವುದಿಲ್ಲ. ಇಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸಮಾನವಾದ ವೇತನವನ್ನು ನೀಡಲಾಗುತ್ತದೆ. ಅಸಂಘಟಿತ ವಲಯದಲ್ಲಿ ಕೂಲಿ ವ್ಯತ್ಯಯಗಳಿವೆ. ಅಸಂಘಟಿತ ಕ್ಷೇತ್ರದ ಉದ್ಯಮಗಳು ಲಿಂಗ ತಾರತಮ್ಯವನ್ನು ವ್ಯಾಪಕವಾಗಿ ಅನುಸರಿಸುತ್ತವೆ.

ಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರು ಸಾಮಾನ್ಯವಾಗಿ ಸುಶಿಕ್ಷಿತರು. ಇವರಿಗೆ ಕಾರ್ಮಿಕ ಸುರಕ್ಷೆ ಮತ್ತು ಕಲ್ಯಾಣ ಕಾನೂನುಗಳ ಸ್ಪಷ್ಟ ಅರಿವಿದೆ. ಆದುದರಿಂದ ವಿದ್ಯಾವಂತ ಕಾರ್ಮಿಕರನ್ನು ಶೋಷಿಸುವುದು ಅಷ್ಟೇನು ಸುಲಭವಲ್ಲ. ಅಸಂಘಟಿತ ವಲಯದಲ್ಲಿ ಸರಕಾರದ ಕನಿಷ್ಠ ಕೂಲಿ, ಮಾತೃತ್ವ ಸಂರಕ್ಷಣೆ ಕಾಯಿದೆ ಜಾರಿಗೊಳ್ಳುತ್ತಿಲ್ಲ. ಈ ಕಾಯಿದೆಗಳನ್ನು ಉದ್ಯಮಗಳು ಸಂಪೂರ್ಣವಾಗಿ ಉಲ್ಲಂಘಿಸುತ್ತಿದ್ದರೂ ಕಾರ್ಮಿಕ ಕಲ್ಯಾಣ ಇಲಾಖೆ ಯಾವುದೇ ಕ್ರಮ ತೆಗೆದುಕೊಳ್ಳುತ್ತಿಲ್ಲ.

ಅಸಂಘಟಿತ ಕ್ಷೇತ್ರದ ಉದ್ಯಮಗಳಲ್ಲಿ ದುಡಿಯುವ ಮಹಿಳೆಯರ ಮೇಲೆ ವಿಭಿನ್ನ ಬಗೆಯ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆದಿವೆ, ನಡೆಯುತ್ತಿವೆ. ಇಂಥ ಪ್ರಯತ್ನಗಳು ಸಹೋದ್ಯೋಗಿ ಪುರುಷ ಕಾರ್ಮಿಕರಿಂದ ಮತ್ತು ಮಾಲಿಕರಿಂದ, ಅವರ ಕುಟುಂಬದ ಪುರುಷ ಸದಸ್ಯರಿಂದ ಉಂಟಾಗುತ್ತವೆ. ಮಹಿಳಾ ಕಾರ್ಮಿಕರ ವಿರುದ್ಧ ನಡೆಯುವ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರಗಳ ಪ್ರಕರಣಗಳು ದಾಖಲಾಗುವುದಿಲ್ಲ, ಬೆಳಕಿಗೆ ಬರುವುದಿಲ್ಲ. ಏಕೆಂದರೆ ಬಡ ಮಹಿಳೆಯರು ಮಾನ ಮರ್ಯಾದೆಗೆ ಅಂಜಿಕೊಂಡು, ವಿವಾಹದ ಭದ್ರತೆ ಕಾಯ್ದುಕೊಳ್ಳಲು ತಮ್ಮ ವಿರುದ್ಧದ ಲೈಂಗಿಕ ಅತ್ಯಾಚಾರಗಳ ಬಗ್ಗೆ ಪೋಲೀಸರಿಗೆ ದೂರು ಕೊಡುವುದಿಲ್ಲ. ಇದು ಬಡ ಅನಕ್ಷರಸ್ಥ ಮಹಿಳೆಯರ ವಿರುದ್ಧ ನಡೆಯುವ ಅಮಾನವೀಯ ಕ್ರೂರ ಹೇಯ ಕೃತ್ಯಗಳಾಗಿವೆ. ಸಂಘಟಿತ ವಲಯದಲ್ಲಿ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆಯುವುದು ಬಹಳ ವಿರಳ ಯಾಕೆಂದರೆ ಅವರು ಅಕ್ಷರಸ್ಥರೂ ಹಾಗೂ ತಿಳುವಳಿಕೆಯುಳ್ಳವರೂ ಆಗಿರುತ್ತಾರೆ.

ಕೊನೆಯಾಗಿದಾಗಿ ಸಂಘಟಿತ ಮತ್ತು ಅಸಂಘಟಿತ ವಲಯಗಳು ಎರಡು ಚಕ್ರದಂತೆ ನಮ್ಮ ಸಮಾಜದಲ್ಲಿ ಕಾರ್ಯವನ್ನು ಮಾಡುತ್ತಾ ಬಂದಿದೆ. ಇದರಿಂದ ಜನರ ಮತ್ತು ದೇಶದ ಆರ್ಥಿಕತೆಯು ಉತ್ತಮಗೊಳ್ಳುತ್ತಿದೆ. ಸರಕಾರವು ಸಂಘಟಿತ ವಲಯಕ್ಕೆ ಕೊಟ್ಟಂತಹ ಸೌಕರ್ಯಗಳನ್ನು ಅಸಂಘಟಿತ ವಲಯಕ್ಕೂ ಕೊಟ್ಟರೆ ದೇಶದ ಆರ್ಥಿಕತೆಯ ಅಭಿವೃದ್ಧಿ ಸಾಧಿಸುವಲ್ಲಿ ಸಂಶಯವಿಲ್ಲ ಮುಂದಿನ ಅಧ್ಯಾಯದಲ್ಲಿ ಅಸಂಘಟಿತ ವಲಯದ ಆರ್ಥಿಕ ಮತ್ತು ಸಾಮಾಜಿಕ ಅವಲೋಕನವನ್ನು ವಿಸ್ತಾರವಾಗಿ ವಿವರಿಸಲಾಗಿದೆ.

## ಅಧ್ಯಾಯ ೩

## ಅಧ್ಯಾಯ ೩: ಅಸಂಘಟಿತ ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅವಲೋಕನಾ

೩.೧ ಪೀಠಿಕೆ

೩.೨ ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆ

೩.೩ ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರು

೩.೪ ಅಸಂಘಟಿತ ವಲಯದ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು

೩.೫ ಅಸಂಘಟಿತ ವಲಯದ ಮಹಿಳಾ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ

## ೩.೧ ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆ

ಭಾರತದ ಕಾರ್ಮಿಕ ಕಾನೂನುಗಳು ನಮ್ಯವಲ್ಲ. ಅವುಗಳು ಅತ್ಯಂತ ಪೈಪೋಟಿಯುಕ್ತ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸಬೇಕಾದ ಉದ್ಯಮಗಳಿಗೆ ಅವಕಾಶವಿರುವ ನಮ್ಯತೆಯನ್ನು ಒದಗಿಸಿಕೊಟ್ಟಿಲ್ಲ. ವಾಸ್ತವವಾಗಿ ಅವುಗಳ ಹೊಸ ಉದ್ಯೋಗಾವಕಾಶಗಳ ನಿರ್ಮಾಣಕ್ಕೆ ಅವಕಾಶ ನೀಡುತ್ತಿಲ್ಲ. ಪ್ರಸ್ತುತ ಅಸ್ತಿತ್ವದಲ್ಲಿರುವ ಕಾರ್ಮಿಕ ಕಾನೂನುಗಳು ವ್ಯವಹಾರ ಮರುಹೊಂದಾಣಿಕೆ ಮತ್ತು ಮರು ಸಂಘಟನೆಯ ಪ್ರಕ್ರಿಯೆಗೆ ತೊಡಕಾಗಿ ಪರಿಣಮಿಸಿವೆ. ಆದ್ದರಿಂದ ಕಾರ್ಮಿಕ ಮಾರುಕಟ್ಟೆಯಲ್ಲಿ ಸುಧಾರಣಾ ಕ್ರಮಗಳನ್ನು ಪರಿಚಯಿಸುವ ಮತ್ತು ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದು ಅವುಗಳನ್ನು ಇತರ ರಾಷ್ಟ್ರಗಳ ಕಾನೂನು ಕ್ರಮಗಳ ಆಚರಣೆಗಳಿಗೆ ಸಮಗೊಳಿಸಬೇಕಾದ ಕಾಲ ಸನ್ನಿಹಿತವಾಗಿದೆ.

### ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ (NCL)

ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರವೀಂದ್ರ ವರ್ಮ ಅವರ ಅಧ್ಯಕ್ಷತೆಯಲ್ಲಿ ೧೯೯೯ ರ ಅಕ್ಟೋಬರ್ ೧೫ ರಂದು ನೇಮಿಸಲಾಯಿತು. ಈ ಆಯೋಗವು ಆರ್ಥಿಕತೆಯ ಜಾಗತೀಕರಣ ಹಾಗೂ ವ್ಯಾಪಾರ ಮತ್ತು ಕೈಗಾರಿಕೆಯ ಉದಾರೀಕರಣದಿಂದ ಉದ್ಭವವಾದ ಹೊಸ ವಾತಾವರಣವನ್ನು ಪರಿಶೀಲಿಸಬೇಕೆಂದು ಆಶಿಸಲಾಯಿತು.

### ಪ್ರಸ್ತಾವನೆಯ ಷರತ್ತುಗಳು

NCL ನ ಪ್ರಸ್ತಾವನೆಯ ಪ್ರಮುಖ ಷರತ್ತುಗಳು ಈ ಮುಂದಿನಂತಿವೆ:

- ಅಸಂಘಟಿತ ವಲಯದ ಕಾರ್ಮಿಕರಿಗೆ ಕನಿಷ್ಠ ಮಟ್ಟದ ರಕ್ಷಣೆಯನ್ನು ನೀಡಲು ಒಂದು ರಕ್ಷಣಾ ಕಾನೂನನ್ನು ಸಲಹೆ ಮಾಡುವುದು, ಮತ್ತು
- ಅದು ತನ್ನ ಶಿಫಾರಸುಗಳ ಚೌಕಟ್ಟನ್ನು ಅಭಿವೃದ್ಧಿಪಡಿಸುವ ವೇಳೆಯಲ್ಲಿ ಕನಿಷ್ಠ ಮಟ್ಟದ ಕಾರ್ಮಿಕ ರಕ್ಷಣೆ ಮತ್ತು ಕ್ಷೇಮಾಭ್ಯುದಯದ ಕ್ರಮಗಳು ಹಾಗೂ ಅವುಗಳ ಕಾರ್ಯಗತಕ್ಕೆ ಒಂದು ಮೂಲ ಸಾಂಸ್ಥಿಕ ಚೌಕಟ್ಟನ್ನು ಒದಗಿಸುವತ್ತ ಗಮನಹರಿಸಬೇಕೆಂದು ಆಶಿಸಲಾಯಿತು.

**ಪ್ರಮುಖ ಶಿಫಾರಸುಗಳು**

ಆಯೋಗವು ತನ್ನ ಅಂತಿಮ ವರದಿಯನ್ನು ೨೦೦೨ ಜೂನ್ ೨೯ ರಂದು ಸಲ್ಲಿಸಿತು. ಅದರ ಪ್ರಮುಖ ಶಿಫಾರಸುಗಳು ಈ ಮುಂದಿನಂತಿವೆ:

i. ಕಾರ್ಮಿಕರನ್ನು ಕೆಲಸದಿಂದ ವಜಾಗೊಳಿಸುವುದಕ್ಕೆ, ತೆಗೆದು ಹಾಕುವುದಕ್ಕೆ ಯಾವುದೇ ಪೂರ್ವಾನುಮತಿಯ ಅಗತ್ಯವಿಲ್ಲ.

ii. ಯಾವುದೇ ವೇತನ ಮಂಡಳಿಯ ಅಗತ್ಯವಿಲ್ಲ.

iii. ರಜಾದಿನಗಳ ಸಂಖ್ಯೆಯನ್ನು ವರ್ಷಕ್ಕೆ ಐದು ದಿನಗಳಿಗೆ ಮತ್ತು ನಿರ್ಬಂಧಿತ ರಜೆಯನ್ನು ೧೦ ದಿನಗಳಿಗೆ ಸೀಮಿತಗೊಳಿಸಬೇಕು.

iv. ಮುಖ್ಯ ಉತ್ಪಾದನೆ ಅಥವಾ ಸೇವೆಗಳಲ್ಲಿ ಗುತ್ತಿಗೆ ಶ್ರಮ ಇರಬಾರದು.

v. ೨೦ ಕ್ಕಿಂತ ಅಧಿಕ ಜನರನ್ನು ನೇಮಿಸಿಕೊಳ್ಳುವ ಸಂಘಟನೆಗಳಲ್ಲಿ ಒಂದು ದೂರು ಪರಿಶೀಲನಾ ಸಮಿತಿಯನ್ನು ರಚಿಸಬೇಕು.

vi. ಪ್ರಧಾನ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಅಧಿಕಾರದ ರಾಷ್ಟ್ರಿಯ ಸಾಮಾಜಿಕ ಭದ್ರತಾ ಪ್ರಾಧಿಕಾರದ ಸೃಷ್ಟಿ, ಮತ್ತು

vii. ಉದ್ಯೋಗ ಸೃಷ್ಟಿ ಮತ್ತು ರಕ್ಷಣೆಗಾಗಿ ಅಸಂಘಟಿತ ವಲಯದ ಕಾರ್ಮಿಕರಿಗೆ ಒಂದು ಕಾನೂನನ್ನು ರಚಿಸುವುದು.

ಅದು ಎಲ್ಲಾ ಕಾರ್ಮಿಕ ಕಾನೂನುಗಳನ್ನು ನ್ಯಾಯಯುತವಾಗಿ ಒಗ್ಗೂಡಿಸಿ ಕಾರ್ಮಿಕ ಮಾಲಿಕ ಸಂಬಂಧ ಕಾನೂನು ಅಥವಾ ಕಾರ್ಮಿಕ ಮಾಲಿಕ ಸಂಬಂಧದ ಕಾನೂನು ಎಂಬ ಒಂದೇ ಕಾನೂನನ್ನು ಜಾರಿಗೊಳಿಸಲು ಸಲಹೆ ನೀಡಿದೆ. ಆಡಳಿತದಲ್ಲಿ ಕಾರ್ಮಿಕರ ಪಾಲ್ಗೊಳ್ಳುವಿಕೆಯ ಕುರಿತು ಅದು ಒಂದು ಕಾನೂನು ರೀತ್ಯಾ ಯೋಜನೆ ರೂಪಿಸಲು ಶಿಫಾರಸು ಮಾಡಿದೆ.

ಕನಿಷ್ಠ ಕೂಲಿ ನಿರ್ಧಾರದ ಕುರಿತು ಆಯೋಗವು ಯಾವುದೇ ಉದ್ಯೋಗದಲ್ಲಿ ಕೊಡಲಾಗುವ ಕನಿಷ್ಠ ವೇತನವು ಕಾರ್ಮಿಕ ಮತ್ತು ಅವನ ಕುಟುಂಬದ ಅಗತ್ಯಗಳನ್ನು ಪೂರೈಸುವಂತಿರಬೇಕು ಎಂದು ಹೇಳಿದೆ. ಅದು ಕೆಲಸದ ಅವಧಿ, ರಜಾ ಸೌಲಭ್ಯ ಮತ್ತು ಕೆಲಸದ ಸ್ಥಳಗಳಲ್ಲಿನ ಕೆಲಸದ ಸ್ಥಿತಿಗತಿಗಳ ಬಗ್ಗೆ ಒಂದು ಸಾಮಾನ್ಯ ನಿಯಮವನ್ನು ರೂಪಿಸಲು ಕರೆ

ನೀಡಿದೆ. ಅದಲ್ಲದೆ ಅಸಂಘಟಿತ ಕಾರ್ಮಿಕರ ಸಂಘ ರಚನೆ ಮತ್ತು ಅದರ ನೋಂದಾವಣೆಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಮಿಕ ಸಂಘಟನೆ ಕಾನೂನಿಗೆ ತಿದ್ದುಪಡಿ ತರಬೇಕು ಎಂದಿದೆ. ವೈಯಕ್ತಿಕ ಸಮಸ್ಯೆಗಳು, ದೂರುಗಳು ಮತ್ತು ಕಷ್ಟ ಕಾರ್ಪಣ್ಯಗಳ ಪರಿಗಣನೆಗೆ ಲೋಕ ಅದಾಲತ್‌ಗಳು, ಕಾರ್ಮಿಕ ನ್ಯಾಯಾಲಯ ಮತ್ತು ಕಾರ್ಮಿಕ ಸಂಬಂಧಗಳ ಆಯೋಗ ಎಂಬ ಮೂರು ಹಂತದ ವ್ಯವಸ್ಥೆಯ ಸೃಷ್ಟಿಗೆ ಆಯೋಗ ಶಿಫಾರಸು ಮಾಡಿದೆ.

**೩.೨ ಅಸಂಘಟಿತ ವಲಯದ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು**

ರಾಷ್ಟ್ರಿಯ ಮಾದರಿ ಸಮೀಕ್ಷೆ ಸಂಸ್ಥೆಯ ೨೦೦೪-೨೦೦೫ ಇಸವಿಯಲ್ಲಿನ ದತ್ತಾಂಶಗಳ ಪ್ರಕಾರ ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ಒಟ್ಟು ೪೫.೯ ಕೋಟಿ ಉದ್ಯೋಗಗಳು ಲಭ್ಯವಾಗಿದ್ದವು. ಅದರಲ್ಲಿ ೨.೬ ಕೋಟಿ ಉದ್ಯೋಗಗಳು ಸಂಘಟಿತ ವಲಯದಲ್ಲಿ, ೪೩.೩ ಕೋಟಿ ಉದ್ಯೋಗಗಳು ಅಸಂಘಟಿತ ವಲಯದಲ್ಲಿ ಇದ್ದವು. ಕೃಷಿ ವಲಯದಲ್ಲಿ ೨೬.೮ ಕೋಟಿ ಕೆಲಸಗಾರರು ಇದ್ದರೆ ೨.೬ ಕೋಟಿ ಜನರು ಕಟ್ಟಡ ನಿರ್ಮಾಣದಲ್ಲಿ ತೊಡಗಿದ್ದು ಉಳಿದವರು ಉತ್ಪಾದನಾ ಕ್ಷೇತ್ರದಲ್ಲಿ ಕೆಲಸ ಮಾಡುವವರು.

ಅಸಂಘಟಿತ ವಲಯದಲ್ಲಿನ ಕಾರ್ಮಿಕರ ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ ಕಾರ್ಯಕ್ರಮಗಳನ್ನು ನೋಡಿಕೊಳ್ಳಲು ಎರಡು ವಿಧದ ತಂತ್ರಗಳನ್ನು ಬಳಸಲಾಗುವುದು – ಶಾಸನಾತ್ಮಕ ಕ್ರಮಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಮತ್ತು ಆ ಕಾರ್ಯಕ್ರಮಗಳ ಅನುಪಾಲನೆ. ಈ ಶಾಸನಾತ್ಮಕ ಕ್ರಮಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳು ಇಂತಿವೆ:

೧. ಕಾರ್ಮಿಕರ ಪರಿಹಾರ ಕಾಯಿದೆ, ೧೯೨೩

೨. ಕನಿಷ್ಠ ವೇತನ ಕಾಯಿದೆ, ೧೯೪೮

೩. ಮಾತೃತ್ವ ಸೌಲಭ್ಯ ಕಾಯಿದೆ, ೧೯೬೧

೪. ಜೀತ ಕಾರ್ಮಿಕ ಪದ್ಧತಿ (ನಿರ್ಮೂಲನಾ ಕಾಯಿದೆ), ೧೯೭೬

೫. ಗುತ್ತಿಗೆ ಕೆಲಸ (ನಿಯಂತ್ರಣ ಮತ್ತು ರದ್ದತಿ ಕಾಯಿದೆ), ೧೯೭೦

೬. ಅಂತರ್‌ರಾಜ್ಯ ವಲಸೆ ಕಾರ್ಮಿಕರ (ಉದ್ಯೋಗ ನಿಯಂತ್ರಣ ಮತ್ತು ಸೇವಾ ಪರಿಸ್ಥಿತಿ) ಕಾಯಿದೆ, ೧೯೭೯

೭. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗ ನಿಯಂತ್ರಣ ಮತ್ತು ಸೇವಾ ಪರಿಸ್ಥಿತಿ) ಕಾಯಿದೆ, ೧೯೯೬

೮. ಆಮ್ ಆದ್ಮಿ ಬಿಮಾ ಯೋಜನೆ (AABY) ಸರಕಾರವು ಇದನ್ನು ೧.೧೦.೨೦೦೭ ರಲ್ಲಿ ಅಸ್ತಿತ್ವಕ್ಕೆ ತಂದಿತು. ಈ ವಿಮೆಯು ಅಪಘಾತ ವಿಮೆ ಮತ್ತು ಯಾವುದೇ ರೀತಿಯ ಭೂಮಿ ರಹಿತ ಕೃಷಿಕನಿಗೆ ಕೊಡಲಾಗಿದೆ. ೧.೯೮ ಕೋಟಿ ಜನರು ಈ ಆಮ್ ಆದ್ಮಿ ಬಿಮಾ ಯೋಜನೆಯನ್ನು ೨೯.೨.೨೦೧೨ರ ಒಳಗೆ ಪಡೆದುಕೊಂಡಿರುತ್ತಾರೆ.

೯. ರಾಷ್ಟ್ರೀಯ ಸ್ವಸ್ಥ ಬಿಮಾ ಯೋಜನೆ (RSBY) ೧.೧೦.೨೦೦೭ ರಂದು ಆರಂಭವಾಯಿತು. ಇಲ್ಲಿ ಅಸಂಘಟಿತ ವಲಯದ ಬಿಪಿಎಲ್ ಕುಟುಂಬಗಳಿಗೆ ಆರೋಗ್ಯ ವಿಮೆಯನ್ನು ಒದಗಿಸಲಾಗುತ್ತದೆ. ಆರೋಗ್ಯ ವಿಮೆಯ ಮೊತ್ತವು ರೂ. ೩೦,೦೦೦ ಗಳಾಗಿರುತ್ತದೆ. ೨೯.೨.೨೦೧೨ ರೊಳಗೆ ಸುಮಾರು ೨.೭೯ ಬಿಪಿಎಲ್ ಕುಟುಂಬಗಳು ಇದರ ಪ್ರಯೋಜನ ಪಡೆದುಕೊಂಡಿವೆ.

೧೦. ಇಂದಿರಾ ಗಾಂಧಿ ನ್ಯಾಷನಲ್ ಓಲ್ಡ್ ಏಜ್ ಪೆನ್ಶನ್ ಸ್ಕೀಮ್ (IGNOAPS). ವ್ಯಕ್ತಿಯು ಬಡತನ ರೇಖೆಗಿಂತ ಕೆಳಗೆ ಇದ್ದು ಅವರ ಪ್ರಾಯ ೬೦ ಆಗಿದ್ದರೆ ಅವರಿಗೆ ಪ್ರತಿ ತಿಂಗಳು ೨೦೦ ರೂಪಾಯಿ ಮತ್ತು ೮೦ ವರ್ಷದವರಾಗಿದ್ದರೆ ಅವರಿಗೆ ಪ್ರತಿ ತಿಂಗಳು ೫೦೦ ರೂಪಾಯಿ ವೃದ್ಧಾಪ್ಯ ಪಿಂಚಣಿ ನೀಡಲಾಗುತ್ತದೆ. ಲ್ಲಿ ೧.೯೦ ಕೋಟಿ ಜನರು ಇದರ ೨೯.೨.೨೦೧೨ ರೊಳಗೆ ಪಡೆದಿರುತ್ತಾರೆ.

೧೧. ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆ ಕಾಯಿದೆ (೨೦೦೮) ಜೀವ ಮತ್ತು ವಿಕಲತೆಯಾಗದಂತೆ ರಕ್ಷಣೆ, ಆರೋಗ್ಯ ಮತ್ತು ಮಾತೃತ್ವ ಸೌಲಭ್ಯ, ವೃದ್ಧಾಪ್ಯದಲ್ಲಿ ರಕ್ಷಣೆ, ಮತ್ತು ಸರಕಾರವು ನಿರ್ಧರಿಸಬಹುದಾದ ಇತರೆ ಸೌಲಭ್ಯಗಳನ್ನು ಅಸಂಘಟಿತ ವಲಯದ ಕಾರ್ಮಿಕರಿಗೆ ಒದಗಿಸಬಹುದಾಗಿದೆ. ಅದರಂತೆ ಸಚಿವಾಲಯವು ರಾಷ್ಟ್ರಿಯ ಸಾಮಾಜಿಕ ಭದ್ರತಾ ಮಂಡಳಿಯನ್ನು ರಚಿಸಿದೆ.

ಹೀಗೆ ಭಾರತದಲ್ಲಿ ಅನೇಕ ಸಾಮಾಜಿಕ ಭದ್ರತಾ ಯೋಜನೆಗಳು ಜಾರಿಗೊಂಡಿವೆ. ಆದರೂ ಸಹ ಈ ಸೌಲಭ್ಯಗಳು ಅಸಂಘಟಿತ ವಲಯದ ಕಾರ್ಮಿಕರಿಗೆ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಭದ್ರತಾ ಕ್ರಮಗಳನ್ನು ಇನ್ನೂ ವ್ಯಾಪಕವಾಗಿ ವಿಸ್ತರಿಸಬೇಕಾಗಿದೆ.

## ೩.೩ ಅಸಂಘಟಿತ ವಲಯದ ಮಹಿಳಾ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ

ಭಾರತದಲ್ಲಿ ಮಹಿಳಾ ಕಾರ್ಮಿಕರು ತೀರಾ ಕೆಳಮಟ್ಟದ ಸಾಮಾಜಿಕ-ಆರ್ಥಿಕ ಸ್ಥಾನಮಾನವನ್ನು ಅನುಭವಿಸುತ್ತಿದ್ದಾರೆ. ದೇಶದ ಸಂವಿಧಾನವು ಮಹಿಳೆ ಮತ್ತು ಪುರುಷರಿಗೆ ಸಮಾನ ಸ್ಥಾನಮಾನ ನೀಡಿದೆ. ಆದರೂ ಅವರ ನಡುವೆ ತೀರಾ ಹೆಚ್ಚಿನ ಮಟ್ಟದ ತಾರತಮ್ಯವು ಈಗಲೂ ಇದೆ. ಭಾರತದ ಮಹಿಳಾ ಕಾರ್ಮಿಕರ ಸಾಮಾಜಿಕ-ಆರ್ಥಿಕ ಸ್ಥಾನಮಾನವನ್ನು ಈ ಮುಂದೆ ವಿವರಿಸಿದೆ.

ಭಾರತದಲ್ಲಿ ಮಹಿಳಾ ಕಾರ್ಮಿಕರಲ್ಲಿ ಬಹುತೇಕ ಭಾಗ ಅನಕ್ಷರಸ್ಥರು ಮತ್ತು ಅಜ್ಞಾನಿಗಳು. ಇದನ್ನು ಸಾಬೀತುಪಡಿಸುವಂತೆ ಪುರುಷರ ಸಾಕ್ಷರತಾ ದರ ಶೇಕಡಾ ೮೨ ಆಗಿದ್ದರೆ ಮಹಿಳಾ ಸಾಕ್ಷರತಾ ದರ ಕೇವಲ ೬೫ ಮಾತ್ರ ಇದೆ. ಅದೇ ರೀತಿ ೧೯೯೯ರಲ್ಲಿ ಒಟ್ಟು ದಾಖಲಾದ ಪ್ರಮಾಣದಲ್ಲಿ ಪುರುಷರು ಶೇಕಡ ೬೨ ಭಾಗ ಆಗಿದರೆ ಮಹಿಳೆಯರ ಪ್ರಮಾಣ ಕೇವಲ ಶೇಕಡಾ ೪೯ ಆಗಿತ್ತು.

ಭಾರತದಲ್ಲಿ ಮಹಿಳಾ ಕಾರ್ಮಿಕರ ಭಾಗವಹಿಸುವಿಕೆಯ ದರ ಪುರುಷ ಕಾರ್ಮಿಕರಿಗಿಂತ ತೀರಾ ಕೆಳಮಟ್ಟದಲ್ಲಿದೆ. ೨೦೦೧ರಲ್ಲಿ ಮಹಿಳಾ ಶ್ರಮಿಕರ ಭಾಗವಹಿಸುವಿಕೆಯ ದರ ಶೇಕಡಾ ೨೬ ಆಗಿದ್ದರೆ ಪುರುಷ ಶ್ರಮಿಕರ ಭಾಗವಹಿಸುವಿಕೆಯ ದರ ಶೇಕಡಾ ೫೨ ಆಗಿತ್ತು.

ಮಹಿಳಾ ಶ್ರಮಿಕರ ಸರಾಸರಿ ದಿನಗೂಲಿ ಗಳಿಕೆಯು ಪುರುಷ ಶ್ರಮಿಕರಿಗಿಂತ ತುಂಬಾ ಕಡಿಮೆಯಿದೆ. ಇದಕ್ಕೆ ಕಾರಣಗಳೆಂದರೆ ಪುರುಷ ಪಕ್ಷಪಾತ, ಅನಕ್ಷರತೆ, ಕಡಿಮೆ ದಕ್ಷತೆ, ಶೋಷಣೆ ಇತ್ಯಾದಿ.

ಭಾರತದ ಮಹಿಳಾ ಕಾರ್ಮಿಕರು ಅಸಂಘಟಿತರು, ಅವರು ಅನಕ್ಷರಸ್ಥರು, ಅಜ್ಞಾನಿಗಳು, ಚದುರಿದವರು ಮತ್ತು ಸಂಪ್ರದಾಯವಾದಿಗಳು ಆಗಿರುವುದರಿಂದ ಸಂಘಟಿತರಾಗಲು ಸಾಧ್ಯವಾಗುತ್ತಿಲ್ಲ.

ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು ಶಿಕ್ಷಣ ಮತ್ತು ತರಬೇತಿಯ ಕೊರತೆಯಿಂದಾಗಿ ಬಹುತೇಕ ಮಹಿಳಾ ಕಾರ್ಮಿಕರು ಅಪರಿಣತರಾಗಿದ್ದಾರೆ. ಇದರ ಫಲವಾಗಿ ಅವರು ಭಾರೀ ಶೋಷಣೆಗೆ ಒಳಗಾಗುತ್ತಿದ್ದಾರೆ.

ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು ತೀರಾ ಕೆಳ ಸಾಮಾಜಿಕ ಸ್ಥಾನಮಾನ ಪಡೆದಿದ್ದಾರೆ. ಭಾರತೀಯ ಸಮಾಜದಲ್ಲಿ ಮಹಿಳೆಯರ ಬಗೆಗೆ ತೀರಾ ಕೀಳು ಕಲ್ಪನೆಗಳಿವೆ. ಇದು ಸಮಾಜಕ್ಕೆ ಅವರ ಪೂರ್ಣ ಕೊಡುಗೆಯನ್ನು ವಿರೂಪಗೊಳಿಸಿದೆ.

ಮಹಿಳೆಯರು ಸಾಮಾನ್ಯವಾಗಿ ಅಪೌಷ್ಠಿಕತೆಯಿಂದ ಬಳಲುತ್ತಾರೆ. ಅಪೌಷ್ಠಿಕತೆಯ ತಾಯಂದಿರು ದುರ್ಬಲ ಮತ್ತು ಅನಾರೋಗ್ಯಕರ ಶಿಶುವಿಗೆ ಜನನ ನೀಡುವುದಲ್ಲದೆ ಅಂತಹ ಶಿಶುಗಳನ್ನು ಸಾಕಿ ಸಲಹಲು ಸಮಸ್ಯೆಗಳನ್ನು ಎದುರಿಸುತ್ತಾರೆ. ಅಪೌಷ್ಠಿಕತೆಯಿಂದಾಗಿ ಮಹಿಳಾ ಶ್ರಮಿಕರ ಆರೋಗ್ಯ ಮತ್ತು ದಕ್ಷತೆ ಕುಂದಿದೆ.

ಅಸಂಘಟಿತ ಮಹಿಳಾ ಕಾರ್ಮಿಕರ ದಕ್ಷತೆ ತೀರಾ ಕಡಿಮೆಯಿದೆ. ಅವರ ಉತ್ಪಾದಕತೆ ಕೂಡಾ ಕಡಿಮೆ. ಶಿಕ್ಷಣ, ತರಬೇತಿಗಳ ಅಭಾವ, ಅನಾರೋಗ್ಯ ಇತ್ಯಾದಿಗಳು ಕಡಿಮೆ ದಕ್ಷತೆಗೆ ಕಾರಣವಾಗಿವೆ.

ಭಾರತದ ಮಹಿಳಾ ಕಾರ್ಮಿಕರ ಉದ್ಯೋಗ ಸಂಚಲನ ತೀರಾ ಕೆಳಮಟ್ಟದಲ್ಲಿದೆ. ಮಹಿಳೆಯರು ಸತತವಾಗಿ ಗರ್ಭಿಣಿಯರಾಗಿ ಅಥವಾ ತಾಯಿಯಾಗಿ ಶಿಶು ಪಾಲನೆಯಲ್ಲಿ ನಿರತರಾಗಿರುವುದರಿಂದ ಮನೆಯಿಂದ ಹೊರಗೆ ಹೆಚ್ಚೇನೂ ಪಾತ್ರ ನಿರ್ವಹಿಸಲಾಗುವುದಿಲ್ಲ. ಇದು ಅವರ ಔದ್ಯೋಗಿಕ ಮತ್ತು ಆರ್ಥಿಕ ಅಂತಸ್ತನ್ನು ಕುಂಠಿತಗೊಳಿಸಿದೆ.

ಲಿಂಗ ಪಕ್ಷಪಾತ ಅಥವಾ ತಾರತಮ್ಯವು ಭಾರತೀಯ ಮಹಿಳಾ ಕಾರ್ಮಿಕರು ಎದುರಿಸುತ್ತಿರುವ ಇನ್ನೊಂದು ಸಮಸ್ಯೆಯಾಗಿದೆ. ಜೀವನದ ಎಲ್ಲಾ ರಂಗಗಳಲ್ಲೂ ಅವರು ಪುರುಷರ ಎದುರು ತಾರತಮ್ಯಕ್ಕೆ ಒಳಗಾಗುತ್ತಿದ್ದಾರೆ. ಅವರನ್ನು ಮಕ್ಕಳನ್ನು ಹೆರುವ ಯಂತ್ರ ಎಂದು ಪರಿಗಣಿಸಿ ಅಡುಗೆ ಕೋಣೆಯ ನಾಲ್ಕು ಗೋಡೆಗಳ ನಡುವೆ ಬಂಧಿಸಲಾಗಿದೆ. ಶಿಕ್ಷಣ ಮತ್ತು ಉದ್ಯೋಗಗಳೆರಡರಲ್ಲೂ ಅವರು ಲಿಂಗ ತಾರತಮ್ಯ ಎದುರಿಸುತ್ತಿದ್ದಾರೆ.

ಈ ಮಹಿಳಾ ಕಾರ್ಮಿಕರು ಹತ್ತು ಹಲವು ವಿಧದ ಶೋಷಣೆಗೆ ಗುರಿಯಾಗುತ್ತಿದ್ದಾರೆ. ಈ ಸತ್ಯವು ಮೇಲೆ ಕಂಡ ಸಂಗತಿಗಳಿಂದ ಸ್ಪಷ್ಟಗೊಳ್ಳುವುದು. ಇಂಥ ಶೋಷಣೆಯ ವಿರುದ್ಧ ಭಾರತದ ಮಹಿಳಾ ಕಾರ್ಮಿಕರು ಸಂಘಟಿತ ಹೋರಾಟ ನಡೆಯಬೇಕಾಗಿದೆ.

**೩.೪ ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕೆ**

ಜಗತ್ತಿನ ಜನಸಂಖ್ಯೆಯ ಶೇಕಡಾ ೪೮ ರಷ್ಟು ಮಂದಿ ಮಹಿಳೆಯರು. ಭಾರತದಲ್ಲೂ ಮಹಿಳೆಯರು ಶೇಕಡಾ ೪೮ ರಷ್ಟಿದ್ದಾರೆ. ಹೀಗೆ ಮಹಿಳಾ ವರ್ಗವು ಒಂದು ಪ್ರಮುಖ

ಜನವರ್ಗವಾಗಿದೆ. ಆದರೆ ಎಲ್ಲಾ ದೇಶಗಳಲ್ಲೂ ಮಹಿಳೆಯರು ಪುರುಷರಿಗೆ ಸರಿಸಮನಾದ ಸ್ಥಾನಮಾನವನ್ನು ಹೊಂದಿಲ್ಲ. ಹೀಗಾಗಿ ಮಹಿಳೆಯರು ಸಾಮಾಜಿಕ–ಆರ್ಥಿಕ–ರಾಜಕೀಯ–ಶಿಕ್ಷಣ–ತಂತ್ರಜ್ಞಾನ ಕ್ಷೇತ್ರಗಳಲ್ಲಿ ಪುರುಷರಿಗೆ ಹೋಲಿಸಿದಂತೆ ಬಹಳ ಹಿಂದುಳಿದಿದ್ದಾರೆ. ರಾಜಕೀಯ ಮತ್ತು ತಂತ್ರಜ್ಞಾನ, ಉನ್ನತ ಶಿಕ್ಷಣ, ವಿಜ್ಞಾನ ಕ್ಷೇತ್ರಗಳಲ್ಲಿ ಮಹಿಳೆಯರು ಅತ್ಯಂತ ಹಿಂದುಳಿದಿದ್ದಾರೆ. ಆದ್ದರಿಂದ ಮಹಿಳೆಯರಿಗೆ ಸಾರ್ವತ್ರಿಕವಾಗಿ ಸರ್ವಾಂಗೀಣವಾಗಿ ಅಭಿವೃದ್ಧಿ ಮತ್ತು ಪಾಲ್ಗೊಳ್ಳುವಿಕೆಯ ಅವಕಾಶಗಳನು ಕಲ್ಪಿಸಬೇಕಾಗಿದೆ. ಈ ಕ್ರಿಯೆಯನ್ನೇ ಮಹಿಳಾ ಸಬಲೀಕರಣ ಎನ್ನಬಹುದು.

ಸಬಲೀಕರಣ ಎಂದರೆ ಶಕ್ತಿ ಸಂಚಯಿಸುವುದೆಂದರ್ಥ. ಅವಲಂಬನೆಯನ್ನು ತೊಡೆದು ಹಾಕಿ ಸ್ವತಂತ್ರವಾದ ಜೀವನ ನಡೆಸಲು ಅಸ್ತಿತ್ವ ಕಂಡುಕೊಳ್ಳುವುದೆಂದರ್ಥ. ಇದು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹಿಳಾ ಸಬಲೀಕರಣದ ಅಗತ್ಯವನ್ನು ಸ್ಪಷ್ಟಪಡಿಸುತ್ತದೆ.

ಮತದಾನದ ಹಕ್ಕು ವ್ಯಕ್ತಿ ರಾಜಕೀಯವಾಗಿ ಪಾಲೊಳ್ಳುವ, ಅಧಿಕಾರ ನಡೆಸುವಿಕೆಯನ್ನು ಪ್ರತಿನಿಧಿಸುತ್ತದೆ. ಆಸ್ತಿ ಹಕ್ಕು, ಆಸ್ತಿ ಹೊಂದುವಿಕೆ, ಕೂಲಿ, ಉದ್ಯೋಗ ಗಳಿಸುವುದು, ಉದ್ಯಮ ಸಂಘಟನಕಾರರಾಗುವುದು, ಎಲ್ಲವೂ ಸಂಬಂಧಿಸಿದ ವ್ಯಕ್ತಿಯ ಆರ್ಥಿಕ ಸಬಲೀಕರಣಕ್ಕೆ ಕಾರಣವಾಗುವುದು. ಇದೇ ರೀತಿ ಸಾಮಾಜಿಕ–ಸಾಂಸ್ಕೃತಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವುದು ಕೂಡಾ ಸಬಲೀಕರಣಕ್ಕೆ ಅವಕಾಶಗಳನ್ನು ತೆರೆಯುವುದು. ಈ ಎಲ್ಲಾ ಬಗೆಯ ಅವಕಾಶಗಳನ್ನು ಮಹಿಳೆ ಪಡೆಯುವುದು ನ್ಯಾಯೋಚಿತವಾಗಿದೆ. ಆದ್ದರಿಂದ ಮಹಿಳಾ ಸಬಲೀಕರಣಕ್ಕೆ ಅಪಾರವಾದ ಸಾಮಾಜಿಕ ಮಹತ್ವವಿದೆ.

ಸಬಲೀಕರಣವೆಂದರೆ ಬಡವರ, ದೀನದಲಿತರ, ಪರಾವಲಂಬಿಗಳ ಶಕ್ತಿ ಸಂವರ್ಧನೆ ಎಂದರ್ಥ. ಮಹಿಳೆಯರೂ ಶೋಷಿತರು. ಹೀಗಾಗಿ ಮಹಿಳಾ ಸಬಲೀಕರಣದ ಕುರಿತು ಜಗತ್ತಿನಾದ್ಯಂತ ಇಂದು ಚರ್ಚೆ ನಡೆಯುತ್ತಿದೆ. ಮಹಿಳೆ ಸಾರ್ವತ್ರಿಕವಾಗಿ ಸಾಮಾಜಿಕ–ಆರ್ಥಿಕ–ರಾಜಕೀಯ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಂಥ ಪರಿಸರ ನಿರ್ಮಾಣವಾಗಬೇಕಾಗಿದೆ. ಈ ದಿಶೆಯಲ್ಲಿ ವಿಶ್ವಸಂಸ್ಥೆಯು ನಡೆಸಿದ ಪ್ರಯತ್ನಗಳ ಫಲವಾಗಿ ಎಲ್ಲಾ ದೇಶಗಳಲ್ಲೂ ಮಹಿಳಾ ಸಬಲೀಕರಣದ ಕುರಿತು ಅರಿವು ಮತ್ತು ಬದ್ಧತೆ ಮೂಡುತ್ತಿದೆ.

ಮಹಿಳಾ ಸಬಲೀಕರಣವು ಕೆಳಕಂಡ ಆಯಾಮಗಳನ್ನು ಒಳಗೊಳ್ಳುವುದು:

೧. ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆ.

೨. ಮಹಿಳೆಗೆ ಆರ್ಥಿಕ-ಸಾಮಾಜಿಕ-ರಾಜಕೀಯ ಅವಕಾಶಗಳ ಸೃಷ್ಟಿ.

೩. ಶಿಕ್ಷಣ ಮತ್ತು ಆರೋಗ್ಯ ಸುರಕ್ಷೆಗಳಿಗೆ ಮಹಿಳೆಯ ಪ್ರವೇಶ.

೪. ಮಹಿಳಾ ಸಬಲೀಕರಣಕ್ಕಾಗಿ ಅವಶ್ಯವಾದ ಕಾನೂನು ಮತ್ತು ಶಾಸನಾತ್ಮಕ ಚೌಕಟ್ಟನ್ನು ನಿರ್ಮಿಸುವುದು. ಇದರೊಳಗೆ ಮಹಿಳಾ ಶೋಷಣೆ, ಮಹಿಳಾ ದಮನ, ಮಹಿಳಾ ತಾರತಮ್ಯಗಳನ್ನು ಮತ್ತು ನಿರಾಕರಣೆಗಳನ್ನು ಅಪರಾಧವೆಂದು ಮತ್ತು ಮಾನವ ಹಕ್ಕುಗಳ ಉಲ್ಲಂಘನೆಯೆಂದು ಪರಿಗಣಿಸಿ ದಂಡ ಮತ್ತು ಶಿಕ್ಷೆ ವಿಧಿಸುವುದು.

ಮೇಲೆ ತಿಳಿಸಿದಂಥ ವಿಷಯಗಳು ಅಸಂಘಟಿತ ವಲಯದ ಮಹಿಳೆಯರಿಗೆ ಅಗತ್ಯವೆಂದು ಕಾಣಿಸುತ್ತವೆ. ಮಹಿಳಾ ಸಬಲೀಕರಣದಿಂದ ಅಸಂಘಟಿತ ಮಹಿಳೆಯರ ಸ್ಥಾನಮಾನವನ್ನು ಹೆಚ್ಚಿಸಬಹುದು ಮತ್ತು ವಂಚಿತರಾಗುವುದರಿಂದ ದೂರ ಮಾಡಬಹುದು. ಮಹಿಳಾ ಸಬಲೀಕರಣವು ಅವಿದ್ಯಾವಂತ, ಅಶಿಕ್ಷಿತ ಮಹಿಳೆಯರಿಗೆ ಸರಿಯಾದ ದಾರಿಯನ್ನು ತೋರಿಸಿಕೊಡುತ್ತಿದೆ. ಇದರಿಂದ ಅವಳು ಸಾಮಾಜಿಕ-ರಾಜಕೀಯ ಮತ್ತು ಆರ್ಥಿಕ ವಲಯಗಳಲ್ಲಿ ಪಾಲ್ಗೊಳ್ಳಲು ಅನುಕೂಲವಾಗುತ್ತದೆ ಮತ್ತು ಲಿಂಗ ತಾರತಮ್ಯವನ್ನು ದೂರ ಮಾಡಬಹುದು.

ಕೊನೆಯದಾಗಿ, ಮಹಿಳೆಯರ ಅಧಿಕಾರದ ರಂಗಪ್ರವೇಶವೆನ್ನುವುದು ಕೇವಲ ನಾಮ ಮಾತ್ರವಾಗಿ ಪುರುಷರು ರಿಮೋಟ್ ಆಗಿ ಕೆಲಸ ಮಾಡಿದ ಉದಾಹರಣೆಗಳು ಧಾರಾಳವಿದೆ. ಇದರಿಂದ ಮಹಿಳೆ ಸಬಲಳಾಗಲು ಖಂಡಿತ ಸಾಧ್ಯವಿಲ್ಲ ಅದುದರಿಂದ ತನ್ನ ಸಾಮಾರ್ಥ್ಯ ಬುದ್ಧಿವಂತಿಕೆಯನ್ನು ಬೆಳೆಸಲು ಮತ್ತು ತನ್ನ ಗೌರವ ವ್ಯಕ್ತಿತ್ವವನ್ನು ಉತ್ತಮಗೊಳಿಸಿದರೆ ಮಾತ್ರ ಮಹಿಳಾ ಮೀಸಲಾತಿಯ ಉದ್ದೇಶ ಈಡೇರಬಹುದೇನೋ? ಮುಂದಿನ ಅಧ್ಯಯನದಲ್ಲಿ ನಮ್ಮ ಅಧ್ಯಯನದ ವಿಷಯವನ್ನು ವಿಶ್ಲೇಷಣೆಯ ಮುಖಾಂತರ ತಿಳಿಯೋಣ.

# ಅಧ್ಯಾಯ ೪

## ಮಂಗಳೂರು ತಾಲೂಕಿನಲ್ಲಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು – ಕ್ಷೇತ್ರಾಧಾರಿತ ಮಾಹಿತಿ ವಿಶ್ಲೇಷಣೆ

೪.೧ ಪ್ರಶ್ನಾವಳಿಗೆ ಉತ್ತರಿಸಿದವರಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಗಳು ಮತ್ತು ಅದರ ವಿಶ್ಲೇಷಣೆಗಳು

೪.೨ ಇತರ ವಿವರಗಳು

೪.೩. ದುಡಿಯುವ ಅಭಿಪ್ರಾಯಗಳು

೪.೪ ಸಮಸ್ಯೆಗಳನ್ನು ಸರಿಪಡಿಸುವ ಮಾರ್ಗೋಪಾಯಗಳು

## ಮಂಗಳೂರು ತಾಲೂಕಿನಲ್ಲಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು – ಕ್ಷೇತ್ರಾಧಾರಿತ ಮಾಹಿತಿ ವಿಶ್ಲೇಷಣೆ

**ಪೀಠಿಕೆ:**

ಆಧುನಿಕ ತಂತ್ರಜ್ಞಾನದಿಂದ ಪ್ರತಿಯೊಂದು ಕ್ಷೇತ್ರವು ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಆದರೆ ಅದರಲ್ಲಿ ಬಟ್ಟೆ ಅಂಗಡಿಗಳು ಮಾತ್ರ ಹಿಂದುಳಿದಿವೆ. ಪ್ರತಿಯೊಬ್ಬ ಮನುಷ್ಯ ತಮ್ಮ ಹೊಟ್ಟೆ ಪಾಡಿಗಾಗಿ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾನೆ ಅದರಲ್ಲಿ ಬಟ್ಟೆ ಅಂಗಡಿಯು ಒಂದು. ಅಸಂಘಟಿತ ವಲಯದಲ್ಲಿ ಬಟ್ಟೆ ಅಂಗಡಿಯು ಅನ್ವಯವಾಗುತ್ತದೆ. ಇಲ್ಲಿ ಯಾವುದೇ ರೀತಿಯ ಸಂಘಟಿತ ಸೌಕರ್ಯಗಳು ಇಲ್ಲಿ ಲಭ್ಯವಿಲ್ಲ ಇಲ್ಲಿ ದುಡಿಯುವವರು ಹೆಚ್ಚಾಗಿ ಅವಿದ್ಯಾವಂತರು, ಬಡವರಾಗಿರುತ್ತಾರೆ.

ದೇಶದ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯದ ಪಾತ್ರ ಬಹು ಮುಖ್ಯಾವಾದದ್ದು. ಯಾಕೆಂದರೆ ಶೇಕಡ ೫೬.೭% ರಷ್ಟು ಆದಾಯ ಅಸಂಘಟಿತ ವಲಯದಿಂದ ಬಂದರೆ ಶೇಕಡಾ ೪೩.೩% ರಷ್ಟು ಆದಾಯ ಸಂಘಟಿತ ವಲಯದಿಂದ ಬರುತ್ತಿದೆ. ಅಸಂಘಟಿತ ವಲಯದ ಕೊಡುಗೆ ಅಧಿಕವಾಗಿರುವುದರಿಂದ ಅದರಲ್ಲಿ ಒಂದಾದ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಬಗ್ಗೆ ತಿಳಿಯಬೇಕೆಂದು ಒಂದು ಕುತೂಹಲ ವಾಗಿರುವುದರಿಂದ ಈ ಮೂಲಕ ಇದರ ಸಂಶೊಧನೆಯನ್ನು ಮಾಡಲಾಗಿದೆ.

ಮಂಗಳೂರು ತಾಲ್ಲೂಕಿನಲ್ಲಿ ಬಟ್ಟೆ ಅಂಗಡಿಗಳು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ ಮತ್ತು ಜಿಲ್ಲೆಯ ಆರ್ಥಿಕ ಬೆಳವಣಿಗೆಯಲ್ಲಿ ಬಹಳ ಉಪಯುಕ್ತವಾಗಿದೆ. ಇದು ಜನರಿಗೆ ಉದ್ಯೋಗ ಮತ್ತು ಆದಾಯ ಪಡೆಯುವಂತೆ ಅವಕಾಶಗಳನ್ನು ಮಾಡಿಮಾಡಿಕೊಡುತ್ತಿದೆ. ಪೇಟೆ ಮಾತ್ರವಲ್ಲದೆ ಜಿಲ್ಲೆಯಲ್ಲಿ ಕೂಡ ಒಂದು ವೇಗವಾಗಿ ಬೆಳೆಯುತ್ತಿರುವ ಅಸಂಘಟಿತ ವಲಯವಾಗಿದೆ. ಇದಲ್ಲದೇ ಅದರಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ದುಡಿಯುತ್ತಿದ್ದು ಅವರ ಸ್ಥಿತಿಗತಿಗಳನ್ನು ನಾವು ಈ ಮೂಲಕ ತಿಳಿಯೋಣ.

ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ ಎಂಬ ಈ ಅಧ್ಯಯನವು ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡುವುದನ್ನು ಉದ್ದೇಶವಾಗಿಟ್ಟುಕೊಂಡು ನಡೆಸಲಾಗಿದೆ. ಈ ಸಮೀಕ್ಷೆಯು ಮಹಿಳಾ ಕಾರ್ಮಿಕರ ವೃತ್ತಿ, ಪ್ರವೃತ್ತಿ, ತೃಪ್ತಿಯ ಕುರಿತಾಗಿ ಮಾತ್ರವಲ್ಲದೆ ಅವರ ಭಾಗವಹಿಸುವಿಕೆಯ ಕುರಿತು ಕೇಂದ್ರೀಕೃತಗೊಂಡಿದೆ.

ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಗಳು ಮತ್ತು ಮಾಲ್‌ಗಳಲ್ಲಿ ಪ್ರಶ್ನಾವಳಿ ವಿಧಾನದ ಮೂಲಕ ಪ್ರಾಥಮಿಕ ಮಾಹಿತಿಯನ್ನು ಮಹಿಳಾ ಕಾರ್ಮಿಕರಿಂದ ಸಂಗ್ರಹಿಸಲಾಯಿತು.

ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸಂಗ್ರಹಿಸಲಾದ ಮಾಹಿತಿಯನ್ನು ಈ ಕೆಳಗಿನ ಶೀರ್ಷಿಕೆಗಳಡಿಯಲ್ಲಿ ಕೋಷ್ಟಕಗಳು ೧ ರಿಂ೮ ೧೨ ರ ಮೂಲಕ ಅಭಿವ್ಯಕ್ತಗೊಳಿಸಲಾಗಿದೆ:

೧. ಕೌಟುಂಬಿಕ ಹಿನ್ನೆಲೆ, ಪ್ರಶ್ನಾವಳಿಗೆ ಉತ್ತರಿಸಿದವರ ವಯಸ್ಸು, ಉದ್ಯೋಗ, ವಾರ್ಷಿಕ ಆದಾಯ ಹಾಗೂ ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಸಾಮಾನ್ಯ ವಿವರಗಳನ್ನೊಳಗೊಂಡ ಕೋಷ್ಟಕಗಳು

೨. ಮಹಿಳಾ ಕಾರ್ಮಿಕರ ಮನೆಯ ವಿವರಗಳು ಮತ್ತು ಇತ್ಯಾದಿ

೩. ಇತರ ವಿವರಗಳು

**೪.೧ ಪ್ರಶ್ನಾವಳಿಗೆ ಉತ್ತರಿಸಿದವರಿಗೆ ಸಂಬಂಧಿಸಿದಂಥ ಸಾಮಾನ್ಯ ಮಾಹಿತಿಗಳು**

ಅಧ್ಯಯನದ ವಿಷಯಕ್ಕೆ ಸಂಬಾಧಿಸಿದಂತೆ ಮಾಹಿತಿ ಸಂಗ್ರಹಣೆಯ ಸಂದರ್ಭದಲ್ಲಿ ಉತ್ತರಿಸಿದವರ ಕೌಟುಂಬಿಕ ಹಿನ್ನೆಲೆಯ ಪರಿಚಯ ಮಾಡಿಕೊಳ್ಳುವ ಪರಿಪಾಠವಿದೆ. ಅದರಂತೆ ಪ್ರಸ್ತುತ ಅಧ್ಯಯನದಲ್ಲಿಯೂ ಪ್ರಶ್ನಾವಳಿಯ ಆರಂಭದಲ್ಲಿ ಮಾಹಿತಿದಾರರ ಹೆಸರು, ವಯಸ್ಸು, ಉದ್ಯೋಗ, ವಾಸಸ್ಥಳ, ಆದಾಯ ಹಾಗೂ ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾತ್ರವಲ್ಲದೆ ಅವರ ಉದ್ಯೋಗದ ಬಗ್ಗೆ ಭಾಗವಹಿಸುವಿಕೆ ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಪ್ರಶ್ನಾವಳಿಯನ್ನು ಮಂಗಳೂರು ತಾಲೂಕಿನ ಆಯ್ದ ೧೦೦ ಮಹಿಳೆಯರಿಗೆ ಹಂಚಲಾಯಿತು. ಅವರಲ್ಲಿ ೫೫ ಮಹಿಳೆಯರು ಮಾತ್ರ ಉತ್ತರಿಸಿದ್ದಾರೆ. ಈ ಪ್ರಶ್ನಾವಳಿಗೆ ಉತ್ತರಿಸಿದವರಲ್ಲಿ ಈ ಕೆಳಕಂಡ ವಯೋಮಾನ ಗುಂಪುಗಳಿಗೆ ಸೇರಿದವರಿದ್ದಾರೆ.

**ಕೋಷ್ಟಕ ೪.೧.: ಮಾಹಿತಿದಾರರ ವಯೋಮಾನದ ವರ್ಗೀಕರಣ**

| ಕ್ರ. ಸಂ. | ವಯೋಮಾನ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ೧೮-೩೦ | ೨೪ | ೪೪ |
| ೨. | ೩೧-೪೪ | ೨೩ | ೪೨ |
| ೩. | ೪೫-೫೪ | ೫ | ೧೯ |
| ೪. | ೫೫ ರಿಂದ ಮೇಲ್ಪಟ್ಟ | ೩ | ೫ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಕೋಷ್ಟಕ ೪.೧ ರ ಪ್ರಕಾರ ಒಟ್ಟು ೫೫ ಮಹಿಳೆಯರಲ್ಲಿ ಶೇ. ೪೪ ರಷ್ಟು ಮಹಿಳೆಯರು ೧೮-೩೦ ವರ್ಷದೊಳಗಿನ ವಯಸ್ಸಿನವರೇ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಯಕ್ಷೇತ್ರದಲ್ಲಿ ಸಂಶೋಧಕರಿಗೆ ಲಭಿಸಿರುತ್ತಾರೆ. ಇದರಿಂದಾಗಿ ನಡು ವಯಸ್ಸಿನ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುತ್ತಿದ್ದಾರೆ ಎಂಬುದು ಇಲ್ಲಿ ತಿಳಿದುಬರುತ್ತದೆ.

ಬದಲಾವಣೆಯ ಪ್ರಮುಖ ಅಸ್ತ್ರ ಶಿಕ್ಷಣ. ಶಿಕ್ಷಣವು ಹೆಣ್ಣು ಮಕ್ಕಳನ್ನು ಸಬಲೀಕರಣದ ಆದೀಗೆ ಕೊಂಡೊಯ್ಯಬಲ್ಲದು. ಈ ಕಾರ್ಯಕ್ಷೇತ್ರದ ಸಂದರ್ಭದಲ್ಲಿ ಕಂಡುಬಂದ ಮಾಹಿತಿದಾರರ ವಿದ್ಯಾರ್ಹತೆಯು ಕೋಷ್ಟಕ ೪.೧.೨ ರಲ್ಲಿ ಅಭಿವ್ಯಕ್ತಗೊಂಡಿದೆ.

**ಕೋಷ್ಟಕ ೪.೨: ಮಾಹಿತಿದಾರರ ವಿದ್ಯಾರ್ಹತೆ**

| ಕ್ರ ಸಂ. | ವಿದ್ಯಾರ್ಹತೆ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಅನಕ್ಷರಸ್ಥೆ | ೬ | ೧೧ |
| ೨. | ಪ್ರಾಥಮಿಕ | ೧೨ | ೨೨ |
| ೩. | ಪ್ರೌಢ ಶಿಕ್ಷಣ | ೭ | ೧೩ |
| ೪. | ಪದವಿಪೂರ್ವ | ೭ | ೧೩ |
| ೫. | ಪದವಿ ಶಿಕ್ಷಣ | ೧೩ | ೨೩ |
| ೬. | ಸ್ನಾತಕೋತ್ತರ | ೧೦ | ೧೮ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಕೋಷ್ಟಕ ೪.೨ ರ ಪ್ರಕಾರ ಒಟ್ಟು ೫೫ ಮಹಿಳೆಯರಲ್ಲಿ ಶೇ. ೨೩ ರಷ್ಟು ಮಹಿಳೆಯರು ಪದವಿ ಶಿಕ್ಷಣವನ್ನು ಮಾಡಿದವರು ಹೆಚ್ಚಿನ ಸಂಖ್ಯೆಯಲ್ಲಿ ಕ್ಷೇತ್ರ ಕಾರ್ಯದಲ್ಲಿ ಸಂಶೋಧಕರಿಗೆ ಲಭಿಸಿರುತ್ತಾರೆ. ಇದರಿಂದಾಗಿ ನಮಗೆ ಕೋಷ್ಟಕದಿಂದ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರು ಶಿಕ್ಷಿತರು ಎಂದು ತಿಳಿದುಬರುತ್ತದೆ.

ಪ್ರತಿಯೊಬ್ಬ ಮನುಷ್ಯನ ಅಭಿವೃದ್ಧಿಯಲ್ಲಿ ಆರ್ಥಿಕ ಅಭಿವೃದ್ಧಿ ಬಹು ಪ್ರಮುಖ ಪಾತ್ರ ವಹಿಸುತ್ತದೆ. ಆರ್ಥಿಕ ಅಭಿವೃದ್ಧಿಯಲ್ಲಿ ಆದಾಯವು ಪ್ರಮುಖವಾಗಿರುತ್ತದೆ. ಆದುದರಿಂದ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅಧ್ಯಯನಕ್ಕೆ ಒಳಪಡಿಸಿರುವ ಮಹಿಳಾ ಉದ್ಯೋಗಿಗಳ ವಾರ್ಷಿಕ ಆದಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ತಿಳಿಯುವುದು ಅಗತ್ಯವೆನಿಸುತ್ತದೆ.

**ಕೋಷ್ಟಕ ೪.೩: ಮಾಹಿತಿದಾರರ ವಾರ್ಷಿಕ ಆದಾಯ**

| ಕ್ರ ಸಂ. | ವರಮಾನ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ೧,೦೦೦ ದಿಂದ ೧೦,೦೦೦ | – | – |
| ೨. | ೧೦,೦೦೦ ದಿಂದ ೨೦,೦೦೦ | ೪೪ | ೮೦ |
| ೩. | ೨೧,೦೦೦ ದಿಂದ ಮೇಲ್ಪಟ್ಟ | ೧೧ | ೨೦ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಕೋಷ್ಟಕ ೪.೩ ರ ಪ್ರಕಾರ ಒಟ್ಟು ೫೫ ಮಹಿಳೆಯರಲ್ಲಿ ಶೇ. ೪೪ ರಷ್ಟು ಮಹಿಳೆಯರ ವಾರ್ಷಿಕ ಆದಾಯವು ೧೦,೦೦೦ ದಿಂದ ೨೦,೦೦೦ ದ ಒಳಗಿದೆ ಎಂಬುದು ಕ್ಷೇತ್ರಕಾರ್ಯದಲ್ಲಿ ಸಂಶೋಧಕರಿಗೆ ತಿಳಿದುಬಂದಿರುತ್ತದೆ. ಇದರಿಂದಾಗಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ವಾರ್ಷಿಕ ಆದಾಯವು ಬಹಳ ಕಡಿಮೆ ಇದೆ ಮತ್ತು ಹೆಚ್ಚಿನ ಮಹಿಳಾ ಕಾರ್ಮಿಕರು ಮಧ್ಯಮ ವರ್ಗಕ್ಕೆ ಸೇರಿರುತ್ತಾರೆ ಎಂದು ತಿಳಿದುಬರುತ್ತದೆ.

ಮಾಹಿತಿದಾರರಲ್ಲಿ ನೀವು ವಾಸವಾಗಿರುವ ಪ್ರದೇಶ ಯಾವುದು? ಎಂದು ಕೇಳಿದಾಗ ೫೫ ಮಾಹತಿದಾರರಲ್ಲಿ ೩೦ ಗ್ರಾಮಾಂತರ ಪ್ರದೇಶದವರೆಂದು ತಿಳಿಸಿರುತ್ತಾರೆ. ಆದುದರಿಂದ

ಹೆಚ್ಚಿನ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಗ್ರಾಮೀಣ ಪ್ರದೇಶಕ್ಕೆ ಸೇರಿರುತ್ತಾರೆ ಎಂಬುದನ್ನು ಕೋಷ್ಟಕ ೪.೪ ರಿಂದ ತಿಳಿಯಬಹುದು.

**ಕೋಷ್ಟಕ ೪.೪: ಮಾಹಿತಿದಾರರ ವಯೋಮಾನದ ವರ್ಗೀಕರಣ**

| ಕ್ರ ಸಂ. | ವಾಸಿಸುವ ಪ್ರದೇಶ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಗ್ರಾಮೀಣ | ೩೦ | ೫೫ |
| ೨. | ನಗರ | ೨೫ | ೪೫ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಉದ್ಯೋಗ ದೊರೆಯುವುದು ಬಹಳ ಕಷ್ಟಕರವಾಗಿದೆ. ಈ ನಿಟ್ಟಿನಲ್ಲಿ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಲ್ಲಿ ಈ ಉದ್ಯೋಗಕ್ಕೆ ಸೇರಲು ಕಾರಣವೇನೆಂದು ಕೇಳಿದಾಗ ಅವರು ನೀಡಿದ ಉತ್ತರವನ್ನು ಕೋಷ್ಟಕ ೪.೧.೫ ರಲ್ಲಿ ನೀಡಲಾಗಿದೆ.

**ಕೋಷ್ಟಕ ೪.೫: ಮಾಹಿತಿದಾರರು ಈ ಉದ್ಯೋಗಕ್ಕೆ ಸೇರಲು ಕಾರಣ**

| ಕ್ರ. ಸಂ. | ಉದ್ಯೋಗದ ಕಾರಣ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಹಣಕಾಸಿನ ಅವಶ್ಯಕತೆ | ೪೦ | ೭೪ |
| ೨. | ಬೇರೆ ಯಾವುದೇ ಕೆಲಸ ಸಿಗದಿರುವುದು | ೧೦ | ೧೮ |
| ೩. | ಇತರೆ | ೫ | ೮ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಕೋಷ್ಟಕ ೪.೫ ರ ಪ್ರಕಾರ ಒಟ್ಟು ೫೫ ಮಹಿಳೆಯರಲ್ಲಿ ಶೇ. ೭೪ ಮಹಿಳೆಯರು ಹಣಕಾಸಿನ ಅವಶ್ಯಕತೆಗೋಸ್ಕರ ಈ ಉದ್ಯೋಗದ ಆಸರೆಯನ್ನು ಪಡೆದಿದ್ದಾರೆ ಎಂಬುದು ಕ್ಷೇತ್ರ ಕಾರ್ಯದಲ್ಲಿ ಸಂಶೋಧಕರಿಗೆ ಕಂಡುಬಂದಿರುತ್ತದೆ.

ಮಹಿಳಾ ಕಾರ್ಮಿಕರು ತಮ್ಮ ಉದ್ಯೋಗ ಕ್ಷೇತ್ರದಲ್ಲಿ ಪುರುಷ ಕಾರ್ಮಿಕರ ನಡುವೆ ಇರುವ ತಾರತಮ್ಯದ ಬಗ್ಗೆ ನೀಡಿದ ಅಭಿಪ್ರಾಯವನ್ನು ಈ ಕೆಳಗಿನ ಕೋಷ್ಟಕದಲ್ಲಿ ಅಭಿವ್ಯಕ್ತಗೊಳಿಸಲಾಗಿದೆ. ಪ್ರತಿಪಾದಕರಲ್ಲಿ ನಿಮಗೆ ಹಾಗು ಪುರುಷ ಕಾರ್ಮಿಕರಲ್ಲಿ ಉದ್ಯೋಗದಲ್ಲಿ ತಾರತಮ್ಯವಿದೆಯೇ ಎಂದು ಕೇಳಿದಾಗ ೪೫ ಮಂದಿ ಇದೆ ಎಂದೂ, ೧೦ ಮಂದಿ ಇಲ್ಲವೆಂದೂ ತಿಳಿಸಿರುತ್ತಾರೆ. ಇದರಿಂದ ತಿಳಿದುಬರುವುದೇನೆಂದರೆ ಇಂದಿಗೂ ಮಹಿಳಾ ಕಾರ್ಮಿಕರು ಮತ್ತು ಪುರುಷ ಕಾರ್ಮಿಕರಲ್ಲಿ ಉದ್ಯೋಗದ ಸ್ಥಳದಲ್ಲಿ ತಾರತಮ್ಯ ನಡೆಸುಲಾಗುತ್ತಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

**ಕೋಷ್ಟಕ ೪.೬: ಕಾರ್ಮಿಕರೊಂದಿಗೆ ಉದ್ಯೋಗದಲ್ಲಿರುವ ತಾರತಮ್ಯ**

| ಕ್ರ. ಸಂ. | ಉದ್ಯೋಗದಲ್ಲಿ ತಾರತಮ್ಯ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಇದೆ | ೪೫ | ೮೨ |
| ೨. | ಇಲ್ಲ | ೧೦ | ೧೮ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಯಾವುದೇ ಉದ್ಯೋಗ ಮಾಡುವಾಗ ಅವರ ಭದ್ರತೆಗೆ ಕೆಲವು ನಿಧಿಗಳನ್ನು ಆಯೋಜಿಸಲಾಗಿರುತ್ತದೆ. ಅದರಲ್ಲಿ ಕಾರ್ಮಿಕರ ಭವಿಷ್ಯನಿಧಿಯೂ ಒಂದು. ಈ ನಿಧಿಯು ಕಾರ್ಮಿಕರ ಸ್ವಲ್ಪ ಹಣವನ್ನು ತೆಗೆದು ಅದಕ್ಕೆ ಮಾಲಕರು ಸರಿಸಮಾನಾದ ಹಣವನ್ನು ಪಾವತಿಸಿ ಅದನ್ನು ಉದ್ಯೋಗಿಯು ಕೆಲಸ ಬಿಡುವ ವೇಳೆ ಕೊಡುವಂಥದ್ದು. ಇದರ ಬಗ್ಗೆ ಮಾಹಿತಿ ಇದೆಯೇ ಎಂದು ಕೇಳಿದಾಗ ಮಾಹಿತಿದಾರರಿಂದ ಬಂದ ಉತ್ತರವನ್ನು ಕೋಷ್ಟಕ ೪.೭ ರಲ್ಲಿ ನೋಡಬಹುದು.

**ಕೋಷ್ಟಕ ೪.೭: ಕಾರ್ಮಿಕರ ಭವಿಷ್ಯನಿಧಿಯ ಬಗ್ಗೆ ತಿಳುವಳಿಕೆ**

| ಕ್ರ. ಸಂ. | ಭವಿಷ್ಯನಿಧಿಯ ಬಗ್ಗೆ ತಿಳುವಳಿಕೆ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಇದೆ | ೨೦ | ೩೬ |
| ೨. | ಇಲ್ಲ | ೩೫ | ೬೪ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ




ಈ ಕೋಷ್ಟಕದಲ್ಲಿ ಇದೆ ಎಂದು ತಿಳಿಸಿದವರಲ್ಲಿ ಶೇ. ೩೬ ಮಹಿಳಾ ಉದ್ಯೋಗಿಗಳು ಈ ವ್ಯವಸ್ಥೆಯನ್ನು ಅನುಭವಿಸುತ್ತಾ ಇದ್ದಾರೆ. ಇನ್ನುಳಿದ ಶೇ. ೬೪ ಮಹಿಳಾ ಉದ್ಯೋಗಿಗಳು ಇದರ ಬಗ್ಗೆ ಮಾಹಿತಿ ಇಲ್ಲವೆಂದು ತಿಳಿಸಿರುತ್ತಾರೆ. ಇದರಿಂದ ಬಟ್ಟೆ ಅಂಗಡಿಯಲ್ಲಿ ದುಡಿಯುವ ಹೆಚ್ಚಿನ ಮಹಿಳೆಯರಿಗೆ ಈ ಸೌಲಭ್ಯವಿಲ್ಲವೆಂದು ತಿಳಿಯುತ್ತದೆ.

## ೪.೨ ಇತರ ವಿಷಯಗಳು

ಮಹಿಳಾ ಕಾರ್ಮಿಕರಲ್ಲಿ ದುಡಿಯುವ ಕ್ಷೇತ್ರದಲ್ಲಿ ಶೌಚಾಲಯದ ವ್ಯವಸ್ಥೆ ಇದೆಯೇ ಎಂದು ಕೇಳಿದಾಗ ಶೇ. ೩೦ ರಷ್ಟು ಮಹಿಳೆಯರು ಇದೆಯೆಂಬ ಮತ್ತುಳಿದ ಮಹಿಳಾ ಕಾರ್ಮಿಕರು ಇಲ್ಲವೆಂದು ಅಂದರೆ ಅವರು ಬೇರೆ ಕಟ್ಟಡಕ್ಕೆ ಹೋಗಿ ದುಡ್ಡು ಕೊಟ್ಟು ಶೌಚಾಲಯವನ್ನು ಉಪಯೋಗಿಸುತ್ತಾರೆಂದು ತಿಳಿಸಿದರು.

ಮಾಹಿತಿದಾರರಲ್ಲಿ ನಿಮಗೆ ಸೂಕ್ತವಾದ ವೇತನ ದೊರಕುತ್ತಿದ್ದೆಯೇ ಎಂದು ಕೇಳಿದಾಗ ಶೇ. ೫೫ ರಷ್ಟು ಮಹಿಳೆಯರು ತಮ್ಮ ದುಡಿಮೆಗೆ ಸರಿಯಾದ ಸಂಬಳ ಇದು ಅಲ್ಲವೆಂದು ಹೇಳುತ್ತಾರೆ. ಯಾಕಾಗಿ ಈ ಕೆಲಸದಲ್ಲಿ ಇದ್ದೀರಾ ಎಂದು ಕೇಳಿದ್ದಕ್ಕೆ ಅವರ ಉತ್ತರಗಳು ಬಡತನ, ಗಂಡಸರ ದುಡಿಮೆ ಕಡಿಮೆ ಇರುವುದು, ಕುಡಿತದ ಚಟವಿರುವ ಗಂಡಸರ ಮನೆಯ ಮಹಿಳೆಯರು, ವಿಧವೆಯರು, ಇತ್ಯಾದಿ, ಕುಟುಂಬದ ದಿನನಿತ್ಯದ ಖರ್ಚುವೆಚ್ಚಗಳಿಗಾಗಿ ಹಾಗೂ ಮಕ್ಕಳ ಶಿಕ್ಷಣಕ್ಕಾಗಿ ಮತ್ತು ಬೆಳೆದು ನಿಂತ ಹೆಣ್ಣು ಮಕ್ಕಳ ಮದುವೆಗಾಗಿ ಮಹಿಳೆಯರು ಇಲ್ಲಿ ದುಡಿಯುವುದು ಅನಿವಾರ್ಯವಾಗಿದೆ ಎಂದು ಉತ್ತರಿಸಿದರು.

ಮಹಿಳಾ ಕಾರ್ಮಿಕರಲ್ಲಿ ತಮ್ಮ ವೇತನದ ಉಳಿತಾಯ ಮಾಡುತ್ತೀರಾ ಎಂದು ಪ್ರಶ್ನಿಸಿದಾಗ ಅವರಿಂದ ಬಂದಂಥ ಉತ್ತರಗಳನ್ನು ಕೋಷ್ಟಕ ೪.೨.೧ ರಿಂದ ತಿಳಿದುಕೊಳ್ಳೋಣ.

**ಕೋಷ್ಟಕ ೪.೮: ವೇತನ ಉಳಿತಾಯ ಮಾಡುವ ಬಗ್ಗೆ**

| ಕ್ರ ಸಂ. | ಉಳಿತಾಯದ ಬಗ್ಗೆ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧. | ಮಾಡುತ್ತೇವೆ | ೨೦ | ೩೬ |
| ೨. | ಮಾಡುವುದಿಲ್ಲ | ೨೫ | ೬೪ |
| | ಒಟ್ಟು | ೫೫ | ೧೦೦ |

ಮೂಲ: ಸಂಶೋಧಕರ ಕ್ಷೇತ್ರಕಾರ್ಯಾಧಾರಿತ ಮಾಹಿತಿ

ಮೇಲಿನಿಂದ ತಿಳಿಯುವುದೇನೆಂದರೆ ಅವರಿಗೆ ಬಂದಂಥ ಸಂಬಳದಿಂದ ಉಳಿತಾಯ ಮಾಡುವುದು ಸಾಧ್ಯವಿಲ್ಲ ಎಂಬುದು ಶೇ. ೩೬ ಮಂದಿಯಿಂದ ತಿಳಿಯುತ್ತದೆ.

ದುಡಿಯುವ ಕ್ಷೇತ್ರದಲ್ಲಿ ದೌರ್ಜನ್ಯಗಳೇನಾದರೂ ಇವೆಯೇ ಎಂದು ಕೇಳಿದಾಗ ಇಲ್ಲ ಎಂಬ ಉತ್ತರವು ಮಾಹಿತಿದಾರರಿಂದ ಬಂದಿರುತ್ತದೆ.

ದಿನದಲ್ಲಿ ನೀವು ಎಷ್ಟು ಹೊತ್ತು ಅಂಗಡಿಯಲ್ಲಿ ಕೆಲಸ ಮಾಡುತ್ತೀರಾ ಎಂದು ಮಾಹಿತಿದಾರರಲ್ಲಿ ಕೇಳಿದಾಗ ಅವರಲ್ಲಿ ಬಂದಂತಹ ಉತ್ತರ ಇಂತಿವೆ.



**ಕೋಷ್ಟಕ ೪.೯: ದುಡಿಯುವ ವೇಳೆಯ ಬಗ್ಗೆ.**

| ಕ್ರ.ಸಂಖ್ಯೆ | ದುಡಿಯುವ ವೇಳೆ | ಸಂಖ್ಯೆ | ಶೇಕಾಡವಾರು |
|---|---|---|---|
| ೧ | ೮ ಗಂಟೆಯ ತನಕ | ೦೦ | ೦೦ |
| ೨ | ೮ ಗಂಟೆಯ ಮೇಲ್ಪಟ್ಟು | ೩೦ | ೫೫ |
| ೩ | ಕೆಲವು ಸಲ ೮ ಗಂಟೆಯಿಂದ ಜಾಸ್ತಿ | ೩೫ | ೪೫ |
| | ಒಟ್ಟು | ೫೫ | ೧೦೦ |




ಮಾಹಿತಿದಾರರಲ್ಲಿ ಒಂದೇ ಒಂದು ಮಹಿಳೆ ಕೇವಲ ೮ ಗಂಟೆಯ ವರೆಗೆ ದುಡಿಯುವುದಿಲ್ಲ ಎಂದು ಉತ್ತರ ಕೊಟ್ಟಿದ್ದಾರೆ ೫೫ ಮಂದಿಯಲ್ಲಿ ೩೦ ಮಂದಿ ೮ ಗಂಟೆಯ ಮೇಲ್ಪಟ್ಟು ಕೆಲಸ ಮಾಡುತ್ತಿದ್ದಾರೆ ಎಂದು ಉತ್ತರ ಕೊಟ್ಟರೆ ೨೫ ಮಂದಿ ಕೆಲವು ಸಲ ಮಾತ್ರ ೮ ಗಂಟೆ ಜಾಸ್ತಿ ಕೆಲಸ ಮಾಡುತ್ತಿದ್ದಾರೆ ಎಂದು ತಿಳಿಯಿತು. ೫೫ ಮಾಹಿತೊದಾರರಲ್ಲಿ ೩೦ ಕಾರ್ಮಿರು ಹೇಳುತ್ತಾರೆ ಏನಂದರೆ ಜಾಸ್ತಿ ದುಡಿಮೆಯಿಂದ ಅವರಿಗೆ ಯಾವಗಲೂ ಕೆಲಸದ ಒತ್ತಡ ಇರುತ್ತದೆ ಎಂದು.

**ಕೋಷ್ಟಕ ೪.೧೦: ವೇಳೆ ಮೀರಿ ದುಡಿಯುವುದರ ಸಂಬಳದ ಬಗ್ಗೆ:**

| ಕ್ರಸಂಖ್ಯೆ | ವೇಳೆ ಮೀರಿ ದುಡಿಯುವುದರ ಸಂಬಳ ಕೊಡುತ್ತಾರಾ? | ಸಂಖ್ಯೆ | ಶೇಕಾಡವಾರು |
|---|---|---|---|
| ೧ | ಮಾಮೂಲಿ ಸಂಬಳ ಮಾತ್ರ | ೨೦ | ೩೬ |
| ೨ | ಗಂಟೆಗೆ ಹಣವನ್ನು ಜಾಸ್ತಿ ಮಾಡುತ್ತಾರೆ | ೩೦ | ೫೪ |
| ೩ | ಗೊತ್ತಿಲ್ಲ | ೫ | ೧೦ |
| | ಒಟ್ಟು | ೫೫ | ೧೦೦ |




ವೇಳೆ ಮೀರಿ ದುಡಿಯುವುದಕ್ಕೆ ಯಾವ ರೀತಿ ಸಂಬಳ ಕೊಡುತ್ತಾರೆ ಎಂದು ಕೇಳಿದಕ್ಕೆ ಅವರಿಂದ ಬಂದಂತಹ ಉತ್ತರದಲ್ಲಿ ಶೇಕಡ ೩೬ ಮಂದಿಗೆ ತಿಂಗಳ ಸಂಬಳದಂತೆ ಕೊಟ್ಟರೆ ಶೇಕಡ ೫೪ ಜನರಿಗೆ ವೇಳೆ ಮೀರಿ ದುಡಿದದ್ದಕ್ಕೆ ಸಾಮಾನ್ಯ ಇಂದು ಗಂಟೆಯಂತೆ ಸಂಬಳವನ್ನು ಕೊಡಲಾಗುತ್ತದೆ ಎಂದು ಮತ್ತು ಶೇಕಡ ೧೦ ರಷ್ಟು ಮಂದಿ ಗೊತ್ತಿಲವೆಂದು ಮಾಹಿತಿ ಕೊಟ್ಟಿರುತ್ತಾರೆ.

**ಕೋಷ್ಟಕ ೪.೧೧: ವಾರದ ರಜೆಯಲ್ಲಿ ಸಂಬಳ ಕೊಡುವುದರ ಬಗ್ಗೆ:**

| ಕ್ರಸಂಖ್ಯೆ | ವಾರದ ರಜೆಯಲ್ಲಿ ಸಂಬಳ ಕೊಡುವುದರ ಬಗ್ಗೆ | ಸಂಖ್ಯೆ | ಶೇಕಾಡವಾರು |
|---|---|---|---|
| ೧ | ಕೊಡುತ್ತಾರೆ | ३೦ | ೫೪ |
| ೨ | ಕೆಲವು ಸಲ ಕೊಡುತ್ತಾರೆ | ೦ | ೦ |
| ३ | ಕೆಲವು ಸಲ ಕೊಡುತ್ತಾರೆ ಮತ್ತು ಕೆಲವು ಸಲ ಕೊಡುವುದಿಲ್ಲ | ೨೫ | ೪೬ |
| | ಒಟ್ಟು | ೫೫ | ೧೦೦ |




ಮಾಹಿತಿದಾರರಲ್ಲಿ ವಾರದ ರಜೆಯಲ್ಲಿ ಸಂಬಳ ಕೊಡುತ್ತಾರೆಯೇ ಎಂಬ ಪ್ರಶ್ನೆಗೆ ಅವರಿಂದ ಬಂದಂತಹ ಉತ್ತರದಲ್ಲಿ ಶೇಕಡ ೫೪ ಮಂದಿ ಎಂದು ಶೇಕಡ೪೬ ಮಂದಿ ಕೆಲವು ಸಲ ಕೊಡುತ್ತಾರೆ ಮತ್ತೆ ಕೆಲವು ಸಲ ಕೊಡುವುದಿಲ್ಲ ಎಂದು ಉತ್ತರಿಸಿರುತ್ತಾರೆ.

**ಕೆಲಸದ ಸ್ಥಳದಲ್ಲಿ ಅವರ ಉದ್ಯೋಗದಿಂದ ಆರೋಗ್ಯದ ಮತ್ತು ರಕ್ಷಣೆಯ ಬಗ್ಗೆ ಮಾಹಿತಿಗಳು.**

ಮಾಹಿತಿದಾರರಿಂದ ಬಂದಂತಹ ಉತ್ತರದಲ್ಲಿ ಅವರಿಗೆ ಉದ್ಯೋಗದಲ್ಲಿ ಆರೋಗ್ಯ ಮತ್ತು ರಕ್ಷಣೆಯ ಬಗ್ಗೆ ಯಾವುದೇ ರೀತಿಯ ಮಾಹಿತಿಯನ್ನು ಪಡೆದಿಲ್ಲವಂತೆ ಮತ್ತು ಅವರಿಗೆ ಯಾವುದೇ ರೀತಿಯ ತರಬೇತಿ ಅಥವಾ ಮಾಹಿತಿಯನ್ನು ಯಾವುದೇ ಕಾರ್ಯಕ್ರಮಗಳ ಮೂಲಕ ಕೊಡುತ್ತಿಲ್ಲವೆಂದು ತಿಳಿಸಿರುತ್ತಾರೆ. ಪ್ರತಿದಿನ ಯಾವುದಾದರೂ ಸಮಸ್ಯಯನ್ನು ಎದುರಿಸುತ್ತಾ ಇರುತ್ತಾರಂತೆ. ಅವರಿಗೆ ಕೆಲಸದಲ್ಲಿ ಖಾಯಂತೆ ಇಲ್ಲ ಸಾಮಾಜಿಕ ಭದ್ರತೆ ಯಾವುದು ಅವರಿಗೆ ದೊರಕುತ್ತಿಲ್ಲ ಎಂದು ಹೇಳಿರುತ್ತಾರೆ. ಯಾವಾಗ ಅವರಿಗೆ ಕೆಲಸದಲ್ಲಿ ಭದ್ರತೆ ಅಥವಾ ರಕ್ಷಣೆ ಇಲ್ಲವೆಂದು ಗೊತ್ತಿರುತ್ತದೆ ಆಗ ಅವರಿಗೆ ಮಾನಸಿಕ ಹಾಗೂ ದೈಹಿಕ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ.



**ಕೋಷ್ಟಕ ೪.೧೨ ಕೆಲಸದಲ್ಲಿ ಒತ್ತಡದ ಅಭದ್ರತೆಯ ಕಾರಣದಿಂದ ಅವರಲ್ಲಿ ಆಗುವ ಆರೋಗ್ಯದ ಸಮಸ್ಯೆ ಮತ್ತು ಖಾಯಿಲೆಯ ಬಗ್ಗೆ:**

| ಕ್ರ.ಸಂಖ್ಯೆ | ಸಮಸ್ಯೆಗಳು | ಸಂಖ್ಯೆ | ಶೇಕಾಡವಾರು |
|---|---|---|---|
| ೧ | ಕಣ್ಣಿನ ಸಮಸ್ಯೆಗಳು | ೪ | ೮ |
| ೨ | ತಲೆನೋವು | ೮ | ೧೪ |
| ೩ | ಶ್ವಾಸಕೋಶದ ಸಮಸ್ಯೆ | ೩ | ೫ |
| ೪ | ಹೊಟ್ಟೆ ನೋವು | ೩ | ೫ |
| ೫ | ವಾಂತಿ | ೩ | ೫ |
| ೬ | ತಲೆಸುತ್ತು | ೩ | ೫ |
| ೭ | ಮೈ ಕೈ ನೋವು | ೧೦ | ೧೮ |
| ೮ | ಬೆನ್ನು ನೋವು | ೮ | ೧೪ |
| ೯ | ಗಂಟು ನೋವು | ೯ | ೧೬ |
| ೧೦ | ಅನೇಮಿಯಾ | ೫ | ೧೦ |
| | ಒಟ್ಟು | ೫೫ | ೧೦೦ |

ಕೋಷ್ಟಕ ೪.೧೨ರ ಪ್ರಕಾರ ಮಾಹಿತಿದಾರರಲ್ಲಿ ಹೆಚ್ಚಿನವರಿಗೆ ತಲೆನೋವು, ಮೈ ಕೈ ನೋವು, ಬೆನ್ನು ನೋವು, ಗಂಟು ನೋವು ಇರುವುದನ್ನು ನಾವು ಗಮನಿಸಬಹುದಾದ ಅಂಶವೆಂದು ತಿಳಿಯ ಬಹುದು ಅವರ ಪ್ರಕಾರ ನಿಂತುಕೊಂಡು ಕೆಲಸ ಮಾಡುವುದರಿಂದ ಈ ಎಲ್ಲಾ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂದು ಉತ್ತರಿಸುತ್ತುದ್ದಾರೆ ಮಾತ್ರವಲ್ಲದೆ ಆದಾಯವು ಸೀಮಿತವಾಗಿರುವುದರಿಂದ ದುಬಾರಿ ಮನೆ ಬಾಡಿಗೆ ನೀಡಿ ವಾಸಿಸಲು ಸಾಧ್ಯವಾಗುತ್ತಿಲ್ಲ. ಮೂಲ ಸೌಕರ್ಯಗಳಿಲ್ಲದ ವಸತಿಗಳಲ್ಲಿ ಅವರು ವಾಸಿಸಿತ್ತಿದ್ದರೆ ನೀರಿನ ಪೂರೈಕೆ, ನೈರ್ಮಲ್ಯವಿಲ್ಲದ ಪರಿಸರದಲ್ಲಿ ವಾಸಿಸುವ ಅನಿವಾರ್ಯತೆ ಇವರಿಗೆ ಏರ್ಪಟ್ಟಿದೆ ಆದುದ್ದರಿಂದ ಅನಾರೋಗ್ಯಗಳಿಗೆ ಒಳಗಾಗುಗ ಸಂಭವಗಳು ಹೆಚ್ಚಾಗಿರುತ್ತವೆ.

ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಜೀವನ ನಿರ್ವಹಣೆಯು ಕಷ್ಟವಾಗಿರುವುದರಿಂದ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ನೀಡಲಿ ವಿಫಲರಾಗಿರುತ್ತಾರೆ

### ೪.೩ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಅಭಿಪ್ರಾಯಗಳು

ಅವರಲ್ಲಿ ಉದ್ಯೋಗದ ಬಗ್ಗೆ ಅಭಿಪ್ರಾಯವನ್ನು ಪಡೆದಾಗ ಅವರಿಂದ ಬಂದಂಥ ಉತ್ತರಗಳು ಇಂತಿವೆ.

ಅವರು ಅಸಹಾಯಕರು ಎಂದರೆ ಮನೆಯ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೇ ಇರುವುದರಿಂದ ತಮ್ಮ ಮದುವೆಯ ಖರ್ಚಿಗಾಗಿ ಈ ಉದ್ಯೋಗವನ್ನು ಆಯ್ದುಕೊಂಡದ್ದು ಎಂದು, ಇನ್ನು ಕೆಲವರು ಮನೆಯ ಇಡೀ ಜವಾಬ್ದಾರಿಯನ್ನು ಹೊರುವುದಕ್ಕಾಗಿ, ಮನೆಯವರಿಂದ ನಿರುಪಯೋಗಿ ಎಂದು ಹೇಳಿಸಿಕೊಳ್ಳಲು ತಯಾರಿಲ್ಲದವರು. ಕೆಲವರು ತಮ್ಮ ವಿದ್ಯೆಯನ್ನು ಮುಂದುವರಿಸಲು ಹಣದ ಅವಶ್ಯಕತೆಗೋಸ್ಕರ ಈ ಉದ್ಯೋಗವನ್ನು ಆಯ್ಕೆ ಮಾಡಿಕೊಂಡಿದ್ದಾರೆ ಎಂದು ತಿಳಿಯಿತು. ಇದರಿಂದ ಅವರಿಗೆ ಉದ್ಯೋಗದಲ್ಲಿ ಸಮಾಧಾನವಿಲ್ಲದಿದ್ದರೂ ಬೇರೆ ದಾರಿ ಇಲ್ಲದೆ ಈ ಉದ್ಯೋಗದಲ್ಲಿ ದುಡಿಯುತ್ತಿದ್ದೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

### ೪.೪ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳನ್ನು ಸರಿಪಡಿಸುವ ಮಾರ್ಗೋಪಾಯಗಳಲ್ಲಿ ಅವರಿಂದ ಬಂದಂತಹ ಉತ್ತರಗಳು

ಕೊನೆಯದಾಗಿ ಉದ್ಯೋಗದಲ್ಲಿ ಇದ್ದಂಥ ಸಮಸ್ಯೆಗಳನ್ನು ಯಾವ ರೀತಿ ಸರಿಪಡಿಸಬಹುದು ಎಂದು ಅವರಲ್ಲಿ ಕೇಳಿದಾಗ ಅವರಲ್ಲಿ ಬಂದಂಥ ಉತ್ತರಗಳು ಇಂತಿವೆ.

ಉದ್ಯೋಗದಲ್ಲಿ ವೇಳೆ. ಸಮಯವನ್ನು ೭.೩೦ ಕ್ಕೆ ಇದ್ದದ್ದನ್ನು ೫.೩೦ ಗಂಟೆಗೆ ಅಥವಾ ೬.೦೦ ಗಂಟೆಗೆ ನಿಲ್ಲಿಸಬೇಕೆಂದು.

ಸರಕಾರಿ ರಜೆಗಳನ್ನು ನಮಗೂ ಕೊಡಬೇಕಾಗಿ ಅವರು ಅಭಿಪ್ರಾಯಪಟ್ಟಿದ್ದರೆ. ಶೌಚಾಲಯದ ವ್ಯವಸ್ಥೆಯನ್ನು ಸರಿಯಾಗಿ ತಮ್ಮ ಉದ್ಯೋಗದ ಸ್ಥಳದಲ್ಲಿಯೇ ಮಾಡಿದರೆ ಉತ್ತಮವೆಂದು, ವೇತನದಲ್ಲಿ ಹೆಚ್ಚಳ ಮಾಡುವ ಬಗ್ಗೆ ದೈನಂದಿನ ಖರ್ಚುಗಳು ಜಾಸ್ತಿಯಾಗುವಾಗ ಅವರ ವೇತನವೂ ಜಾಸ್ತಿ ಮಾಡುವಂತೆ ಉಪಾಯವನ್ನು ಕೊಟ್ಟಿದ್ದಾರೆ. ಶಾಲಾ ರಜಾ ಸಮಯದಲ್ಲಿ ಮಕ್ಕಳನ್ನು ಮನೆಯಲ್ಲಿ ಬಿಟ್ಟು ಬರುವುದು ಕಷ್ಟ, ಅಂಥ ಸಮಯದಲ್ಲಿ ಅವರ ಅಮಕ್ಕಳಿಗೆ ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸುವುದರಿಂದ, ವ್ಯಕ್ತಿಗತ ಸ್ವಾತಂತ್ರ್ಯವನ್ನು ಹೆಚ್ಚಿಸುವುದರಿಂದ, ಉದ್ಯೋಗದಲ್ಲಿ ತಾರತಮ್ಯ ಅಥವಾ ವ್ಯತ್ಯಾಸವಿಲ್ಲದಂತೆ ಮಾಡುವುದರಿಂದ, ಮೂಲಭೂತ ಸೌಕರ್ಯಗಳನ್ನು ಒದಗಿಸುವುದರಿಂದ (ಆಹಾರ, ಚಹಾ, ಶೌಚಾಲಯ, ಇತ್ಯಾದಿ), ಇ. ಎಸ್. ಐ. ಮತ್ತು ಕಾರ್ಮಿಕ ಭವಿಷ್ಯ ನಿಧಿಯನ್ನು ಕಲ್ಪಿಸುವುದರಿಂದ

ಕಾರ್ಮಿಕರ ನಡುವೆ ಒಗ್ಗಟ್ಟನ್ನುಂಟುಮಾಡುವುದು ಕಾಲಕಾಲಕ್ಕೆ ದೊರಕಬೇಕಾದ ಸೌಲಭ್ಯಗಳೊಂದಿಗೆ ಬೋನಸ್ಸ್ ದೊರಕುವಂತೆ ನೋಡಿಕೊಳ್ಳುವುದು ಮತ್ತು ಮುಂಭಡ್ತಿಯನ್ನು ಕಾಲಕಾಲಕ್ಕೆ ಕೊಡುವುದರಿಂದ ತಮ್ಮ ಉದ್ಯೋಗ ಕ್ಷೇತ್ರದಲ್ಲಿ ಸಮಸ್ಯೆಗಳನ್ನು ಸರಿಪಡಿಸಬಹುದೆಂದು ಈ ಮೂಲಕ ತಿಳಿಸಿರುತ್ತಾರೆ.

ಮೇಲೆ ತಿಳಿಸಿದಂತಹ ಉಪಾಯಗಳನ್ನು ಬಟ್ಟೆ ಅಂಗಡಿಗಳ ಮಾಲಕರು, ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಅವರ ಸಮಸ್ಯೆಗಳನ್ನು ಆದಷ್ಟು ಪರಿಹರಿಸಿ ಅವರಿಗೆ ಸರಿಯಾದ ಸಾಮಾಜಿಕ ಅರಿವು ಮೂಡಿಸುವ ಹಾಗೂ ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಗೊಳಿಸುವ ಕಾರ್ಯವನ್ನು ಮಾಡಬೇಕಾಗಿದೆ. ಎಷ್ಟು ಬೇಗನೆ ನಾವಿದನ್ನು ಮಾಡಲು ಸಮರ್ಥರಾಗುತೇವೆಯೋ ಅಷ್ಟು ಬೇಗನೆ ನೋವು, ಸಂಕಟ, ಪೀಡನೆ ಮತ್ತು ಶೋಷಣೆಗಳಿಗೆ ಒಳಾಗಾಗಿರುವ ಮಹಿಳೆ ತಮ್ಮನ್ನು ಕಾಡುವ ಸಮಸ್ಯೆಗಳಿಂದ ಒಂದಿಷ್ಟಾದರೂ ಉಪಶಮನ ಪಡೆಯಬಹುದಾಗಿದೆ.

# ಅಧ್ಯಾಯ ೫

# ಸಲಹೆ, ಸೂಚನೆಗಳು ಮತ್ತು ಸಂಹಾರ

೫.೧ ಸಾರಾಂಶ

೫.೨ ಸಲಹೆ ಸೂಚನೆಗಳು

೫.೩ ಭವಿಷ್ಯದ ಸಂಶೋಧನಾ ಸಾಧ್ಯತೆಗಳು

೫.೪ ಸಮಾಪ್ತಿ

ಅಧ್ಯಯನದ ಆಧಾರದಲ್ಲಿ ಸಾರಾಂಶ ಮತ್ತು ಫಲಿತಗಳನ್ನು ಕೊನೆಯಲ್ಲಿ ನೀಡಲಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಗ್ರಂಥಗಳು, ಲೇಖನ, ವರದಿಗಳು ಮತ್ತು ಪೂರ್ವಾಧ್ಯಯನಗಳ ಪರಾಮರ್ಶೆಯ ಮೂಲಕ ವಿಶ್ಲೇಷಣೆ ಮಾಡಿ ಮಾಹಿತಿ ಸಂಗ್ರಹಣೆ ಮಾಡುವುದರ ಜೊತೆಗೆ ಕ್ಷೇತ್ರಾಧಾರಿತ ಅಧ್ಯಯನವನ್ನು ಮಾಡಲಾಗಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ಅವಿಷ್ಕಾರಗಳ ಮತ್ತು ಅವಲೋಕನಗಳ ಆಧಾರದ ಮೇಲೆ ಮಹಿಳಾ ಕಾರ್ಮಿಕರ ಅಭಿವೃದ್ಧಿಗೆ ಸಲಹೆಗಳನ್ನು, ಭವಿಷ್ಯದ ಸಂಶೋಧನಾ ಸಾಧ್ಯತೆಗಳನ್ನು ಹಾಗೂ ಉಪಸಂಹಾರವನ್ನು ನೀಡಲಾಗಿದೆ.

ನಮ್ಮ ಸಮಾಜದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಈ ಸಂದರ್ಭದಲ್ಲಿ ಮಹಿಳೆ ವೃತ್ತಿಪರಳಾಗಿ ಗುರುತಿಸಿಕೊಳ್ಳುವಂತೆ ಮಾನಸಿಕ, ಕೌಟುಂಬಿಕ, ಸಾಂಸ್ಥಿಕ ಹಾಗೂ ಸಾಮಾಜಿಕವಾಗಿ ಸಬಲಳಾಗಿದ್ದಾಳೆ ಎಂಬುದನ್ನು ನಾವು ತಿಳಿಯುತ್ತಿದ್ದೇವೆ.

ನ್ಯಾಷನಲ್ ಸ್ಯಾಂಪಲ್ ಸರ್ವೇ ಆರ್ಗನೈಸೇಷನ್ ಪ್ರಕಾರ ೨೦೦೦ ಇಸವಿಯಿಂದ ಈಚೆಗೆ ಭಾರತದಲ್ಲಿ ೨೫.೯ಳ ದಶಲಕ್ಷ ಮಹಿಳಾ ಕಾರ್ಮಿಕರು ವಿವಿಧ ಉದ್ದಿಮೆಗಳಲ್ಲಿ ದುಡಿಯುತ್ತಿದ್ದರೆ. ಭಾರತದಲ್ಲಿ ಒಟ್ಟು ದುಡಿಯುವ ವರ್ಗದಲ್ಲಿ ಕೇವಲ ಶೇ. ೮ ರಷ್ಟು ಕಾರ್ಮಿಕರಿಗೆ ಮಾತ್ರವೇ ಸಾಮಾಜಿಕ ಭದ್ರತೆಯ ಶಾಸನ ಅನ್ವಯವಾಗುತ್ತಿದೆ. ಇನ್ನುಳಿದ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಶಾಸನ ಅನ್ವಯವಾಗದೆ ಅಸಂಘಟಿತ ಕಾರ್ಮಿಕರು ವಿವಿಧ ಸವಲತ್ತುಗಳಿಂದ ವಂಚಿತರಾಗಿದ್ದಾರೆ. ಇಂದಿನ ಬೆಲೆ ಏರಿಕೆಯ ದಿನಮಾನಗಳಲ್ಲಿ ಜೀವನ ಸಾಗಿಸುವುದೇ ಕಷ್ಟವಾಗುತ್ತಿದೆ. ಬರುವ ಅಲ್ಪ ವರಮಾನದಲ್ಲಿಯೇ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗದಂತಿದೆ. ಅಸಂಘಟಿತ ಮಹಿಳೆಯರಿಗೆ ಹಕ್ಕು ಪತ್ರ ನೀಡಿ ಸಾಮಾಜಿಕ ಭದ್ರತೆ ಕಲ್ಪಿಸಬೇಕು. ಇ. ಎಸ್. ಐ. ಕಾರ್ಮಿಕ ವಿಮೆ ಜಾರಿಗೊಳಿಸಬೇಕು.

ಸರಕಾರದ ಇಚ್ಛಾಶಕ್ತಿಯ ಕೊರತೆಯಿಂದ ಇಂದಿಗೂ ಕೂಡಾ ಕೋಟ್ಯಾಂತರ ಜನ ಮೂಲಭೂತ ಸೌಲಭ್ಯ ವಂಚಿತರಾಗಿದ್ದಾರೆ. ದೇಶದ ಸಂಪತ್ತನ್ನು ಬೆಳೆಸುವ, ದುಡಿಯುವ ವರ್ಗದ ಜನ ಅದರ ಲಾಭದಲ್ಲಿ ಪಾಲುದಾರರಾಗುತ್ತಿಲ್ಲ. ಅಸಂಘಟಿತ ವಲಯದ ಮಹಿಳೆಯರಿಗೆ ಆಶ್ರಯ ಹಕ್ಕುಪತ್ರ ನೀಡಿ ಮನೆಗಳನ್ನು ನಿರ್ಮಿಸಿಕೊಡಬೇಕು.

ಈಚೆಗಷ್ಟೇ ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣ ಮಂಡಳಿ ಜಾರಿಗೆ ಬಂದಿದ್ದು ಅದು ಅಂಬೆಗಾಲಿಡುತಿದೆ. ಅಸಂಘಟಿತ ವಲಯದ ಕಾರ್ಮಿಕರಿಗೆ ಸೌಲಭ್ಯ ಕಲ್ಪಿಸುವ ಮೂಲಕ ಸಾಮಾಜಿಕ ಭದ್ರತೆ ಕಲ್ಪಿಸಿ ಕೊಡಬೇಕು. ಇದೇ ಅಸಂಘಟಿತ ಕಾರ್ಮಿಕರಿಗೆ ಒಂದು ವರ್ಷಕ್ಕೆ ೧

ಲಕ್ಷ ಕೋಟಿ ಹಣ ಸಂದಾಯವಾಗುತ್ತಿದೆ. ಹೀಗಿದ್ದರೂ ಕನಿಷ್ಠ ಸೌಲಭ್ಯ ಕಲ್ಪಿಸಲು ಸರಕಾರ ಹಿಂದೇಟು ಹಾಕುತ್ತಿರುವುದು ಸರಿಯಲ್ಲ.

ಸಮಸ್ಯೆಗಳನ್ನು ಹೋಗಲಾಡಿಸಲು ಸರಕಾರವು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದ್ದರೂ ಈ ಕಾರ್ಯಕ್ರಮಗಳು ಎಲ್ಲರನ್ನು ತಲುಪುತ್ತಿಲ್ಲ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ. ಬಟ್ಟೆ ಅಂಗಡಿಯ ಮಹಿಳಾ ಉದ್ಯೋಗಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯು ಇನ್ನೂ ಹಿಂದುಳಿದಿದೆ ಎನ್ನುವುದು ಅಧ್ಯಯನದ ಊಹೆಯಾಗಿದ್ದರೂ, ಕ್ಷೇತ್ರಕಾರ್ಯದ ಸಮಯದಲ್ಲಿ ಮಹಿಳಾ ಕಾರ್ಮಿಕರು ತಮ್ಮ ಸಾಮಾಜಿಕ-ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದು ತಿಳಿಸಿರುತ್ತಾರೆ. ಆದರೆ ಮಾಹಿತಿದಾರರು ತಮ್ಮ ಸಾಮಾಜಿಕ-ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲು ಸರಕಾರದಿಂದ ಯಾವುದೇ ರೀತಿಯ ಸಾಲ ಸೌಲಭ್ಯಗಳು ದೊರೆಯುತ್ತಿಲ್ಲ ಎಂದು ತಿಳಿಸಿರುತ್ತಾರೆ.

ಹಂತ ಹಂತದಲ್ಲಿ ಪ್ರತಿಯೊಂದು ರೀತಿಯ ತಾರತಮ್ಯವನ್ನು, ಪುರುಷ ಕಾರ್ಮಿಕರೊಡನೆ ಕೆಲಸದಲ್ಲಿ ಹಾಗೂ ವೇತನದಲ್ಲಿ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ ಎನ್ನುವುದು ಅಧ್ಯಯನದಿಂದ ತಿಳಿದುಬಂದಿರುವ ವಿಷಯವಾಗಿದೆ.

ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರು ಹೆಚ್ಚಾಗಿದ್ದು ಸ್ವಸಹಾಯ ಸಂಘ, ಸ್ತ್ರೀಶಕ್ತಿ ಗುಂಪು, ಯುವತಿ ಮಂಡಳಿಗಳು ಮುಂತಾದವುಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಸ್ವಾವಲಂಬಿಯಾಗಿ ಬದುಕಲು ಪ್ರಯತ್ನಿಸುತ್ತಿದ್ದಾರೆ ಎಂಬುದು ಅಧ್ಯಯನದಿಂದ ತಿಳಿದುಬಂದಿರುವ ಅಂಶವಾಗಿದೆ. ಇವು ಮಹಿಳೆಯರ ಸಬಲೀಕರಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಹೆಚ್ಚಿನ ಮಹಿಳಾ ಕಾರ್ಮಿಕರು ಕಡಿಮೆ ಮತ್ತು ಹೆಚ್ಚು ಶಿಕ್ಷಣವನ್ನು ಪಡೆದವರಾಗಿರುತ್ತಾರೆ ಎಂಬುದು ಕ್ಷೇತ್ರಕಾರ್ಯದ ಅಂಕಿ ಅಂಶಗಳ ಆಧಾರದಲ್ಲಿ ತಿಳಿದುಬಂದ ಅಂಶವಾಗಿದೆ. ಆದರೆ ಮಹಿಳೆಯರು ಸಾಕ್ಷರತೆಯ ಹಾದಿಯಲ್ಲಿ ಮೊದಲಿಗಿಂತ ಮುಂದುವರಿದಿದ್ದಾರೆ ಎಂದು ತಿಳಿಯಲಾಗುತ್ತಿದೆ.

ಮಹಿಳಾ ಕಾರ್ಮಿಕರು ಹೆಚ್ಚಿನ ಆದಾಯಕ್ಕಾಗಿ ಹೆಚ್ಚು ಸಮಯ ದುಡಿಯಬೇಕಾಗುತ್ತದೆ. ಹೀಗೆ ಹೆಚ್ಚು ಸಮಯ ದುಡಿಯುವುದರಿಂದ ದೈಹಿಕ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಅಲ್ಲದೆ ಇನ್ನೂ ಅನೇಕ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಇವರ ನೋವುಗಳಿಗೆ ಸ್ಪಂದಿಸಿ ಈ

ತೊಂದರೆಗಳಿಂದ ಪಾರು ಮಾಡಲು ಸರಕಾರ ಮತ್ತು ಸಂಘ ಸಂಸ್ಥೆಗಳು ಮುಂದೆ ಬಂದಿರುವುದು ಶ್ಲಾಘನೀಯ.

## ೫.೧ ಸಾರಾಂಶ

ಈ ಅಧ್ಯಯನದ ಸಮಾಪ್ತಿಯಲ್ಲಿ ತಿಳಿಯುವುದೇನೆಂದರೆ ಅಸಂಘಟಿತ ವಲಯದ ಕಾರ್ಮಿಕರನ್ನು ವ್ಯಾಖ್ಯಾನಿಸಲು ಕಷ್ಟಕರವಾಗಿರುತ್ತದೆ. ಆದರೆ ಅವರನ್ನು ಗುರುತಿಸಲು ಅವರ ಉದ್ಯೋಗದ ರಕ್ಷಣೆಯಲ್ಲಿ ಅಥವಾ ಸಂಸ್ಥೆಯಲ್ಲಿ ಒಟ್ಟಾರೆಯಾಗಿ ದುಡಿಯುವಂಥ ಕಾರ್ಮಿಕರೆಂದು ತಿಳಿಯಬಹುದು. ಅಸಂಘಟಿತ ವಲಯದ ಲಕ್ಷಣಗಳೇನೆಂದರೆ ಕಡಿಮೆ ಕೂಲಿ, ಕಡಿಮೆ ಆದಾಯ, ಅಧಿಕ ಮಹಿಳಾ ಕೆಲಸಗಾರರು, ಬಾಲಕಾರ್ಮಿಕರು ಹೆಚ್ಚಾಗಿ ಕಾಣಸಿಗುತ್ತಾರೆ. ಈ ಅಧ್ಯಯನದಲ್ಲಿ ಮಂಗಳೂರಿನ ಬಟ್ಟೆ ಅಂಗಡಿ ಮಹಿಳಾ ಕಾರ್ಮಿಕರು ಹೆಚ್ಚಾಗಿ ಬಡವರಾಗಿದ್ದು ಉದ್ಯೋಗದ ವಿಚಾರದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಶೋಷಣೆಗೆ ಒಳಗಾಗಿದ್ದಾರೆ.

"ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳು – ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ" ಈ ಅಧ್ಯಯನವು ಬಟ್ಟೆ ಅಂಗಡಿಯ ಮಹಿಳಾ ಕಾರ್ಮಿಕರ ಸ್ಥಿತಿಗತಿ, ಅವರ ವೇತನಗಳ ಬಗ್ಗೆ, ಅಸಂಘಟಿತ ವಲಯದಲ್ಲಿ ಸರಕಾರ ಕೈಗೊಂಡ ಕಾರ್ಯಕ್ರಮ ಮತ್ತು ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಸ್ಥಿತಿಗತಿಗಳನ್ನು ಕಂಡುಹಿಡಿಯುವ ಕಾರ್ಯವನ್ನು ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಪಟ್ಟ ಅಸಂಘಟಿತ ವಲಯದ ವಿವರಗಳನ್ನು ಕೊಟ್ಟು, ಅಸಂಘಟಿತ ವಲಯದ ವಿವಿಧ ಕಾರ್ಯಕ್ಷೇತ್ರಗಳನ್ನು ಪರಿಚಯಿಸಿ ಈ ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಮಹತ್ವ, ಅಧ್ಯಯನ ಪ್ರದೇಶದ ಪರಿಚಯವನ್ನು ನೀಡಲಾಗಿದೆ, ಯಾವ ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ, ಅಧ್ಯಯನವು ಯಾಕೆ ಮಹತ್ವಪೂರ್ಣವಾಗಿದೆ, ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಕಲ್ಪನೆಗಳನ್ನು, ವಿಷಯಗಳನ್ನು ಬಳಸಿಕೊಳ್ಳಲಾಗಿದೆ ಎಂದು ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರ ಸ್ಥೂಲ ಪರಿಚಯವನ್ನು ನೀಡಲಾಗಿದೆ. ಅದರಲ್ಲಿ ಅಸಂಘಟಿತ ವಲಯದ ಉಗಮ, ಪ್ರಾಮುಖ್ಯತೆ ಮತ್ತು ಗುಣಲಕ್ಷಣಗಳು, ಸಮಾಜಕ್ಕೆ ಅಸಂಘಟಿತ ವಲಯದ ಕೊಡುಗೆಯ ಬಗ್ಗೆ ಮತ್ತು ಸಮಸ್ಯೆಗಳ

ಬಗ್ಗೆ, ಸಂಘಟಿತ ಮತ್ತು ಅಸಂಘಟಿತ ವಲಯದ ವ್ಯತ್ಯಾಸಗಳನ್ನು ಎರಡನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಪ್ರಮುಖ ವಿಷಯವಾಗಿರುವ ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆಗಳನ್ನು ಅಸಂಘಟಿತ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು, ಅಸಂಘಟಿತ ವಲಯದ ಮಹಿಳಾ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ, ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರು ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯವು ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಂದ ಪಡೆದ ಮಾಹಿತಿ ಮತ್ತು ವಿಶ್ಲೇಷಣೆಗಳನ್ನು, ದುಡಿಯುವ ಮಹಿಳೆಯರ ಅಭಿಪ್ರಾಯಗಳು, ಸಮಸ್ಯೆಯನ್ನು ಸರಿಪಡಿಸುವ ಮಾರ್ಗೋಪಾಯಗಳು, ಇತ್ಯಾದಿ ವಿಷಯಗಳನ್ನು ತಿಳಿಯಪಡಿಸುತ್ತದೆ.

ಕೊನೆಯ ಅಧ್ಯಾಯದಲ್ಲಿ ಸಾರಾಂಶ, ಸಲಹೆ ಸೂಚನೆಗಳು, ಭವಿಷ್ಯದ ಸಂಶೋಧನಾ ಸಾಧ್ಯತೆಗಳನ್ನು ನೀಡಲಾಗಿದೆ ಮತ್ತು ಉಪಸಂಹಾರವನ್ನು ಪ್ರಸ್ತುತಪಡಿಸಲಾಗಿದೆ. ಕೊನೆಯಲ್ಲಿ ಅನುಬಂಧ, ಪ್ರಶ್ನಾವಳಿಯ ಬಗ್ಗೆ ಮತ್ತು ಪರಾಮರ್ಶನ ಗ್ರಂಥಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**೫.೨ ಮಹಿಳಾ ಕಾರ್ಮಿಕರ ಅಭಿವೃದ್ಧಿಗೆ ಸಲಹೆ ಸೂಚನೆಗಳು**

ಮಹಿಳಾ ಕಾರ್ಮಿಕರ ನೋವುಗಳಿಗೆ ಸ್ಪಂದಿಸಿ ಈ ತೊಂದರೆಗಳಿಂದ ಪಾರು ಮಾಡಲು ಕೆಲವು ಸಲಹೆ ಸೂಚನೆಗಳ ಮೂಲಕ ಈ ಮಹಿಳೆಯರಿಗೆ ತಕ್ಕಮಟ್ಟಿನ ನ್ಯಾಯ ಒದಗಿಸಬಹುದಾಗಿದೆ. ಈ ಸಂಬಂಧವಾಗಿ ಕೆಲವು ಸಲಹೆಗಳನ್ನು ನೀಡಬಹುದಾಗಿದೆ:

೧. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರ ವರ್ಗಗಳಿಗೆ ಅನುಗುಣವಾಗಿ ಅವರನ್ನು ಸಂಘಟಿಸಿ ಈ ಮೂಲಕ ಅವರಲ್ಲಿ ಮಾಲಿಕರಿಂದ ಮತ್ತು ಸಹೋದ್ಯೋಗಿಗಳಿಂದ ಎದುರಾಗುವ ಸಮಸ್ಯೆಗಳ ಬಗ್ಗೆ ಜಾಗೃತಿ ಮೂಡಿಸುವುದು.

೨. ಸ್ತ್ರೀಯರಿಗಾಗಿ ಕಾನೂನು ಅರಿವಿನ ಶಿಬಿರಗಳನ್ನು ಕಾನೂನು ತಜ್ಞರ ನೆರವಿನೊಂದಿಗೆ ಏರ್ಪಡಿಸಿ ಮಹಿಳೆಯರಿಗೆ ಅವರ ಹಕ್ಕು ಹಾಗೂ ವಿಶೇಷ ಕಾನೂನುಗಳ ಬಗ್ಗೆ ಮನವರಿಗೆ ಮಾಡಿಕೊಡುವುದು.

೩. ಅಸಂಘಟಿತ ವಲಯದ ದುಡಿಯುವ ಮಹಿಳೆಯರನ್ನು ಸ್ತ್ರೀಶಕ್ತಿ ಗುಂಪುಗಳ ಮೂಲಕ ಸಶಕ್ತಗೊಳಿಸುವುದು.

೪. ಅಸಂಘಟಿತ ವಲಯದ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಮಕ್ಕಳ ಲಾಲನೆ, ಪಾಲನೆ, ಪೋಷಣೆಗಾಗಿ ಬಾಲವಾಡಿಗಳನ್ನು ಸ್ಥಾಪಿಸಿ ಆ ಮೂಲಕ ಪೌಷ್ಟಿಕ ಆಹಾರವನ್ನು ಪೂರೈಸುವುದು.

೫. ಅಸಂಘಟಿತ ವಲಯದ ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಗಣತಿ ಕಾರ್ಯವನ್ನು ಕಾರ್ಮಿಕ ಕಲ್ಯಾಣ ಇಲಾಖೆಯ ಮುಖಾಂತರ ಕೈಗೊಂಡು ಅವರಿಗೆ ಕನಿಷ್ಠ ವೇತನ ದೊರೆಯುವಂತೆ ಸರಕಾರ ಕ್ರಮ ಕೈಗೊಳ್ಳುವುದು.

೬. ಉದ್ಯಮಶೀಲ ಮಹಿಳೆಯರಿಗೆ ಬ್ಯಾಂಕುಗಳಲ್ಲಿ ಸಿಗಬಹುದಾದ ಧನಸಹಾಯದ ಬಗ್ಗೆ ತಿಳುವಳಿಕೆ ಮೂಡಿಸುವುದು.

೭. ಕುಟುಂಬದಲ್ಲಿ ಮತ್ತು ಉದ್ಯೋಗದ ಸ್ಥಳದಲ್ಲಿ ಮಹಿಳೆಯರ ಮೇಲೆ ಆಗುವ ದೌರ್ಜನ್ಯಗಳನ್ನು ಖಂಡಿಸಿ ಅದರ ವಿರುದ್ಧ ಪ್ರತಿಭಟನೆಯನ್ನು ಹಮ್ಮಿಕೊಳ್ಳುವುದು ಮತ್ತು ರಕ್ಷಣಾ ಕಾಯ್ದೆಯ ಬಗೆಗೆ ಸ್ವಯಂ ಸೇವಾ ಸಂಘಗಳ ಮೂಲಕ ಮಹಿಳೆಯರಲ್ಲಿ ಅರಿವು ಮೂಡಿಸುವುದು.

೮. ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರನ್ನು ಕುರಿತಂತೆ ವ್ಯವಸ್ಥಿತವಾದ ಅಧ್ಯಯನವನ್ನು ಕೈಗೊಳ್ಳುವುದು.

೯. ಆರೋಗ್ಯ ತಪಾಸಣಾ ಶಿಬಿರಗಳನ್ನು ಆಯೋಜಿಸಿ ಮಹಿಳೆಯರಿಗೆ ಆರೋಗ್ಯವನ್ನು ಕಾಯ್ದುಕೊಳ್ಳಬೇಕಾದ ಅಗತ್ಯ ಕಾರ್ಯಕ್ರಮಗಳನ್ನು ತಿಳಿಸುವುದು.

ಈ ಕೆಲವು ಕಾರ್ಯಗಳ ಮುಖಾಂತರ ಬಡ ಮಹಿಳೆಯರ ಸ್ಥಿತಿಗತಿಯನ್ನು ಸುಧಾರಿಸಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಶೀಘ್ರ ಕ್ರಮ ಕೈಗೊಳ್ಳಬೇಕಾದ ಅವಶ್ಯಕತೆ ಇದೆ. ಈ ಮೂಲಕ ಮಹಿಳೆಯರು ಸಬಲರೂ, ಆತ್ಮವಿಶ್ವಾಸವುಳ್ಳವರೂ, ಆಗುವಂತೆ ಮಾಡಬಹುದಾಗಿದೆ. ಮಹಿಳೆಯರ ಉನ್ನತಿಯಲ್ಲಿ ಸಮಾಜದ ಹಾಗೂ ರಾಷ್ಟ್ರದ ಉನ್ನತಿಯೂ ಅಡಗಿದೆ.

## ೫.೩ ಭವಿಷ್ಯದ ಸಂಶೋಧನಾ ಸಾಧ್ಯತೆಗಳು

ಪ್ರತಿಯೊಂದು ಸಂಶೋಧನಾ ಅಧ್ಯಯನದಲ್ಲಿ ಆಯ್ದುಕೊಂಡ ವಿಷಯದ ಬಗ್ಗೆ ಹೊಸ ಹೊಸ ವಿಷಯಗಳನ್ನು ತಿಳಿಯುವ ಪ್ರಯತ್ನ ಮಾಡಲಾಗುತ್ತಿದೆ. ಅಂತಹುದೇ ವಿಷಯಕ್ಕೆ ಸಂಬಂಧಿಸಿದಂತೆ ಮುಂದಿನ ಅಧ್ಯಯನಗಳ ಸಾಧ್ಯತೆಯ ಬಗ್ಗೆಯೂ ಹೇಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೂಂದಿನ ಅಧ್ಯಯನದ ಸಂಶೋಧನೆಗಳ ಸಾಧ್ಯತೆಯ ವಿವರವನ್ನು ಈ ಕೆಳಗಿನಿಂದ ಗುರುತಿಸಬಹುದು.

- ಮಹಿಳಾ ಉದ್ಯೋಗಿಗಳ ವ್ಯಕ್ತಿತ್ವ ವಿಕಾಸದ ಬಗ್ಗೆ ಅಧ್ಯಯನವನ್ನು ಮಾಡಬಹುದಾಗಿದೆ.
- ಮಹಿಳೆಯರಿಗೆ ಅವರ ಹಕ್ಕು ಮತ್ತು ವಿಶೇಷ ಕಾನೂನುಗಳ ಬಗ್ಗೆ ಮನವರಿಕೆಯ ಬಗ್ಗೆ ಅಧ್ಯಯನವನ್ನು ಮಾಡಬಹುದಾಗಿದೆ.

## ೫.೪ ಸಮಾಪ್ತಿ

ಇದು ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು – ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನವಾಗಿದೆ.

ಮಂಗಳೂರು ತಾಲೂಕಿನಲ್ಲಿ ಕೈಗೊಂಡ ಪ್ರಕರಣ ಅಧ್ಯಯನವು ಮಂಗಳೂರು ತಾಲೂಕಿನಲ್ಲಿ ಆಯ್ದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳೆಯರ ಸಂದರ್ಶನವನ್ನು ಒಳಗೊಂಡಿತ್ತು. ಮಹಿಳಾ ಕಾರ್ಮಿಕರ ಜೊತೆ ಸಮಾಲೋಚನೆ ನಡೆಸಿ ಅವರಿಂದ ಮಾಹಿತಿ ಸಂಗ್ರಹಿಸಿ ಮಾಡಿದ ಅಧ್ಯಯನವಾಗಿದೆ. ೨೧ನೇ ಶತಮಾನದಲ್ಲಿ ಅತೀ ವೇಗದಿಂದ ಸಾಗುತ್ತಿರುವ ಜಗತ್ತಿನಲ್ಲಿ ಮಹಿಳಾ ಕಾರ್ಮಿಕರು ಸ್ವಾವಲಂಬಿಯಾಗಿ ಬದುಕುವುದು ಅತೀ ಅವಶ್ಯಕವಾಗಿದೆ. ಈ ಅಧ್ಯಯನದ ನೆರವಿನಿಂದ ದಿನೇ ದಿನೇ ಹೆಚ್ಚುತ್ತಿರುವ ಮಹಿಳೆಯ ಸಮಸ್ಯೆಗಳು ಅದರ ಕಾರಣ ಮತ್ತು ಪರಿಣಾಮಗಳು, ಮಹಿಳೆಯರ ಮುಂತಾದುವುಗಳನ್ನು ಅರ್ಥಮಾಡಿಕೊಂಡು ವಿಶ್ಲೇಷಿಸಲು ನೆರವಾಗಿದೆ. ಒಟ್ಟಾಗಿ ಈ ಅದ್ಯಯನವು ಮಹಿಳಾ ಕಾರ್ಮಿಕರ ದೃಷ್ಟಿಕೋನದಿಂದ ಅರ್ಥೈಸಲು ಅವರ ಪಾತ್ರ ಮತ್ತು ಹಕ್ಕುಗಳ ಅರಿವನ್ನು ಮೂಡಿಸಲು ಮಹಿಳೆಯರ ಅಭಿವೃದ್ಧಿಗೆ ಮಾರಕವಾಗಿರುವ ಅಡೆತಡೆಗಳನ್ನು ತೊಡೆದುಹಾಕಲು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಲು ಸರಿಯಾದ ಅರಿವನ್ನು ಮೂಡಿಸುವ ಹಾಗೂ ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಗೊಳಿಸುವ ಕಾರ್ಯ ಆಗಬೇಕಾಗಿದೆ. ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಕಾರ್ಮಿಕರು ಬಹಳ ಮಂದಿ ಇದ್ದು ಸರಕಾರ ಹಾಗೂ ಸಂಘ

ಸಂಸ್ಥೆಗಳ ಜೊತೆ ಅವರನ್ನು ಗುರುತಿಸುವ, ಗೌರವದಿಂದ ಕಾಣುವ, ಅವರ ಆರ್ಥಿಕ ಕೊಡುಗೆಗಳನ್ನು ಮೌಲ್ಯಮಾಪನ ಮಾಡುವ ಮತ್ತು ಅವರ ಮುಂದಿನ ಪ್ರಗತಿಗೆ ಪ್ರೋತ್ಸಾಹ, ಉತ್ತೇಜನ ಗಳಿಸಿಕೊಡುವ ಮನಸ್ಸು, ನಿರ್ಧಾರ ನಮ್ಮೆಲ್ಲರದ್ದಾಗಬೇಕೆಂದು ಆಶಿಸುವ ಮತ್ತು ನಮ್ಮ ಕೈಯಲ್ಲಾದ ಪ್ರಯತ್ನವನ್ನು ಮಾಡಿ ಅವರಿಗೆ ಸಮಾಜದಲ್ಲಿ ಒಂದು ಒಳ್ಳೆಯ ಸ್ಥಾನವನ್ನು ಕಲ್ಪಿಸುವಲ್ಲಿ ಒಂದು ಅವಕಾಶವನ್ನು ಮಾಡಿಕೊಡೋಣ.

# ಅನುಬಂಧ ೧

## ಕರ್ನಾಟಕದ ನಕ್ಷೆ



## ಅನುಬಂಧ ೨

### ದಕ್ಷಿಣ ಕನ್ನಡದ ನಕ್ಷೆ



# ಅನುಬಂಧ ೩

## ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ಮಹಿಳಾ ಉದ್ಯೋಗಿಗಳು
## ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನ

ಪೀಠಿಕೆ

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವು ಅಸಂಘಟಿತ ವಲಯದ ಬಟ್ಟೆ ಅಂಗಡಿಗಳ ಮಹಿಳಾ ಉದ್ಯೋಗಿಗಳ ಆರ್ಥಿಕ ಅಭಿವೃದ್ಧಿಯಲ್ಲಿ ಅವರ ಕೊಡುಗೆಯನ್ನು ಪರಿಶೀಲಿಸುವುದು ಮತ್ತು ಸ್ಥಳೀಯ ಮಟ್ಟದಲ್ಲಿ ಅಸಂಘಟಿತ ವಲಯದ ಬಟ್ಟೆ ಅಂಗಡಿಗಳ ಮಹಿಳಾ ಉದ್ಯೋಗಿಗಳ ಸಾಮರ್ಥ್ಯ/ಸ್ಪರ್ಧಾತ್ಮಕತೆಯನ್ನು ಹೆಚ್ಚಿಸುವ ಸಾಧ್ಯತೆಗಳ ಬಗ್ಗೆ ಪರಾಮರ್ಶೆ ನಡೆಸುವುದು.

ಸೂಚನೆಗಳು:-

ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನೆಗಳಿಗೆ ಚುಟುಕಾಗಿ ಉತ್ತರಿಸಬಹುದು. ಇನ್ನು ಕೆಲವು ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸರಿಯಾದುದನ್ನು ಉತ್ತರಿಸಿದರಾಯಿತು.

- ಈ ಸಮೀಕ್ಷೆಯನ್ನು ಕೇವಲ ಅಧ್ಯಯನದ ಉದ್ದೇಶಕ್ಕಾಗಿ ಮಾತ್ರ ಮಾಡಲಾಗುತ್ತಿದೆ.
- ನೀವು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಗೌಪ್ಯತೆಯನ್ನು ಕಾಪಾಡಲಾಗುವುದು.
- ನಿಮ್ಮ ಇತರೆ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯವಿದ್ದಲ್ಲಿ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು.
- ನಿಮ್ಮ ಸಹಕಾರಕ್ಕಾಗಿ ಅನಂತ ಕೃತಜ್ಞತೆಗಳು

ಸಾಮಾನ್ಯ ಮಾಹಿತಿ

1. ಹೆಸರು :
2. ವಯಸ್ಸು :

ಅ) 18 – 20 ☐ ಆ) 21 – 44 ☐

ಇ) 45 – 54 ☐ ಈ) 55 ಮತ್ತು ಮೇಲ್ಪಟ್ಟು ☐

3. ಉದ್ಯೋಗ :

4. ವಾಸ ಸ್ಥಳ :

5. ವಾರ್ಷಿಕ ಆದಾಯ :

ಅ) 1,000 ರಿಂದ 10,000 ☐ ಆ) 10,000 ರಿಂದ 20,000 ☐

ಇ) 20,000 ರಿಂದ ಮೇಲ್ಪಟ್ಟು ☐

6. ವಿದ್ಯಾರ್ಹತೆ

ಅ) ಅನಕ್ಷರಸ್ಥೆ ☐ ಆ) ಪ್ರಾಥಮಿಕ ಶಿಕ್ಷಣ ☐

ಇ) ಪ್ರೌಢ ಶಿಕ್ಷಣ ☐ ಈ) ಪದವಿಪೂರ್ವ ಶಿಕ್ಷಣ ☐

ಉ) ಪದವಿ ಶಿಕ್ಷಣ ☐ ಊ) ಸ್ನಾತಕೋತ್ತರ ☐

7. ಕೌಟುಂಬಿಕ ಹಿನ್ನಲೆ

ಅ) ಅವಿಭಕ್ತ ಕುಟುಂಬ ☐ ಆ) ಅಣು ಕುಟುಂಬ ☐

ಇ) ವಿಸ್ತರಿತ ಕುಟುಂಬ ☐

8. ವೈವಾಹಿಕ ಸ್ಥಾನಮಾನ

ಅ) ಮದುವೆಯಾಗಿದೆ ☐ ಆ) ಮದುವೆಯಾಗಿಲ್ಲ ☐

ಇ) ವಿಧವೆ ☐ ಈ) ವಿಚ್ಛೇದಿತೆ ☐

ಉ) ಬೇರೆಯಾದವರು ☐ ಊ) ಇತರರು ☐

ಪ್ರಾಥಮಿಕ ವಿವರಗಳು

9. ಯಾವ ಕೆಲಸ ಮಾಡುತ್ತಿದ್ದಿರಾ?

10. ನೀವು ಅಸಂಘಟಿತ ವಲಯದಲ್ಲಿ ಕೆಲಸ ಮಾಡಲು ಇಷ್ಟಪಡುತ್ತೀರಾ?

ಅ) ಹೌದು ☐ ಆ) ಇಲ್ಲ ☐

11. ನಿಮಗೆ ದುಡಿಯುವಲ್ಲಿ ಕೆಲಸದ ಭದ್ರತೆ ಇದೆಯಾ?

ಅ) ಹೌದು ☐ ಆ) ಇಲ್ಲ ☐

12. ಬಟ್ಟೆ ಅಂಗಡಿಯಲ್ಲಿ ಕೆಲಸ ಮಾಡಲು ಮನೆಯವರ ಸಂಬಂಧಿಕರ ಒಪ್ಪಿಗೆ ಇದೆಯೇ?

ಅ) ಹೌದು ☐ ಆ) ಇಲ್ಲ ☐

13. ದುಡಿಯುವ ಸ್ಥಳದಲ್ಲಿ ಗಂಡು-ಹೆಣ್ಣು ಎಂಬ ಬೇಧವಿದೆಯಾ?

ಅ) ಹೌದು ☐ ಆ) ಇಲ್ಲ ☐

14. ಬಟ್ಟೆ ಅಂಗಡಿಯಲ್ಲಿ ನಿಮಗೆ ಆರೋಗ್ಯ ರಕ್ಷಣೆ ಇದೆಯೇ?

ಅ) ಹೌದು ☐ ಆ) ಇಲ್ಲ ☐

15. ಬಟ್ಟೆ ಅಂಗಡಿಯಲ್ಲಿ ನಿಮ್ಮ ಸಹೋದ್ಯೋಗಿಗಳೊಂದಿಗೆ ವ್ಯವಹರಿಸಲು ಇಷ್ಟಪಡುತ್ತೀರಾ?

ಅ) ಹೌದು ☐ ಆ) ಇಲ್ಲ ☐

16. ಬಟ್ಟೆ ಅಂಗಡಿಯಲ್ಲಿ ದುಡಿಯುವಾಗ ನಿಮಗೆ ದೌರ್ಜನ್ಯ ನಡೆದಿದೆಯೇ?

ಅ) ಹೌದು ☐ ಆ) ಇಲ್ಲ ☐

17. ಕಾರ್ಮಿಕರ ಹಕ್ಕುಗಳ ಬಗ್ಗೆ ಮಾಹಿತಿ ಇದೆಯೇ?

ಅ) ಹೌದು ☐ ಆ) ಇಲ್ಲ ☐

18. ಕಾರ್ಮಿಕರ ಭವಿಷ್ಯನಿಧಿಯ ಬಗ್ಗೆ ತಿಳುವಳಿಕೆ ಇದೆಯಾ?

ಅ) ಹೌದು ☐ ಆ) ಇಲ್ಲ ☐

19. ಕೆಲಸ ಮಾಡುವ ಸ್ಥಳದಲ್ಲಿ ಮಹಿಳಾ ದೌರ್ಜನ್ಯಗಳೇನಾದರೂ ಇದೆಯಾ? ಇಲ್ಲವಾ?

ಅ) ಹೌದು ☐ ಆ) ಇಲ್ಲ ☐

20. ಅಸಂಘಟಿತ ವಲಯದಲ್ಲಿ ಕಾರ್ಮಿಕರ ಭವಿಷ್ಯನಿಧಿಯ ಸೌಲಭ್ಯ ಇದೆಯೇ?

ಅ) ಹೌದು ☐ ಆ) ಇಲ್ಲ ☐

21. ದುಡಿಯುವ ಸ್ಥಳದಲ್ಲಿ ಸರಿಯಾಗಿ ವೇತನ ಪಾವತಿ ಮಾಡುತ್ತಾರೆಯೇ?

ಅ) ಹೌದು ☐ ಆ) ಇಲ್ಲ ☐

22. ದುಡಿಯುವ ಸ್ಥಳದಲ್ಲಿ ನಿಮಗೆ ಮೂಲಭೂತ ಸೌಕರ್ಯಗಳಿವೆಯಾ?

ಅ) ಹೌದು ☐ ಆ) ಇಲ್ಲ ☐

23. ನಿಮಗೆ ಸರಿಯಾದ ಕೆಲಸಕ್ಕೆ ಸರಿಯಾದ ವೇತನ ಲಭ್ಯವಿದೆಯಾ?

ಅ) ಹೌದು ☐ ಆ) ಇಲ್ಲ ☐

24. ನಿಮಗೆ ಸರಕಾರಿ ರಜಾ ದಿನಗಳ ಸೌಲಭ್ಯವಿದೆಯಾ?

ಅ) ಹೌದು ☐ ಆ) ಇಲ್ಲ ☐

25. ನಿಮಗೆ ದುಡಿಯುವ ಸ್ಥಳದಲ್ಲಿ ವಾರ್ಷಿಕ ವೇತನ ಹೆಚ್ಚಳ ಆಗಿದೆಯೇ?

ಅ) ಹೌದು ☐ ಆ) ಇಲ್ಲ ☐

26. ನಿಮ್ಮ ದುಡಿಯುವ ಸ್ಥಳದಲ್ಲಿ ಆರೋಗ್ಯವಿಮೆ ಯೋಜನೆಗಳಿವೆಯೇ?

ಅ) ಹೌದು ☐ ಆ) ಇಲ್ಲ ☐

27. ಬಟ್ಟೆ ಅಂಗಡಿಯಲ್ಲಿ ದುಡಿಯುವ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆ ಚೆನ್ನಾಗಿದೆಯಾ?

ಅ) ಹೌದು ☐ ಆ) ಇಲ್ಲ ☐

28. ಉದ್ಯೋಗದ ಬಗ್ಗೆ ನಿಮಗೆ ಇರುವ ಅಭಿಪ್ರಾಯ

29. ಸಮಸ್ಯೆಗಳು ಇದ್ದರೆ ಅದನ್ನು ಸರಿಪಡಿಸುವ ಮಾರ್ಗೋಪಾಯಗಳನ್ನು ತಿಳಿಸುವಿರಾ?

ಸ್ಥಳ:

ದಿನಾಂಕ: ಸಹಿ/-

## ಅನುಬಂಧ ಗ್ರಂಥಗಳು


- ಅಶ್ವಿನಿ ಮಹಾಜನ್ (ಮೂಲ): (೧೯೯೮) ಜಾಗತೀಕರಣ ಮತ್ತು ಉದ್ಯೋಗ, ಸ್ವದೇಶಿ ಜಾಗರಣ ಮಂಚ್, ಕರ್ನಾಟಕ.
- ಅನ್ನಪೂರ್ಣೇಶ್ವರಿ ಎನ್. "ಭಾರತದ ಆರ್ಥಿಕಾಭಿವೃದ್ಧಿ", ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು.
- ಅರ್ಜುನ್ ದೇವ್, ಇಂದಿರಾ ಅರ್ಜುನ್ ದೇವ್, ಸುಪ್ತಾದಾಸ್, ಅನುವಾದ ಕೆ. ಎಚ್. ಶ್ರೀನಿವಾಸ್. ಮಾನವ ಹಕ್ಕುಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ.
- ಹ್ಯೂಮನ್ ರೈಟ್ಸ್ – ಎ ವೆರಿ ಶಾರ್ಟ್ ಇಂಟ್ರಡಕ್ಷನ್, ಆ್ಯಂಡ್ರೂ ಕ್ಲಾಪ್‌ಹಮ್, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ೨೦೦೭.
- ಗವರ್ನ್‌ಮೆಂಟ್ ಆಫ್ ಕರ್ನಾಟಕ, ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್, ಕರ್ನಾಟಕ ೧೯೯೯, ಬೆಂಗಳೂರು: ಡಿಪಾರ್ಟ್‌ಮೆಂಟ್ ಆಫ್ ಪ್ಲ್ಯಾನಿಂಗ್ ಆ್ಯಂಡ್ ಸ್ಟೆಟಿಸ್ಟಿಕ್ಸ್, ೧೯೯೯.
- ಎಂ. ಚಂದ್ರ ಪೂಜಾರಿ, ಸಂಶೋಧನ ಪ್ರಸ್ತಾವ, ವಿದ್ಯಾರಣ್ಯ: ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.
- ಚಂದ್ರಶೇಖರ ಟಿ. ಆರ್., ೨೦೦೧, ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಜೆರಾಲ್ಡಿನ್ ಫೋರ್ಬ್ಸ್, ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಶ್ರಿಮತಿ ಎಚ್. ಎಸ್. (ಅನು), ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಕಮಲಾದೇವಿ ಚಟ್ಟೋಪಾಧ್ಯಾಯ, ೧೯೮೪, ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ, ವೈದೇಹಿ (ಅನು), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.
- ಲೀಲಾವತಿ ಚಾರಿ, ೧೯೯೨, ಮಹಿಳೆಯರ ಹಕ್ಕುಗಳು, ಪ್ರಫುಲ್ಲಾ ನಾಯಿಕ (ಅನು), ಜಾಗೃತ ಭಾರತ ಪ್ರಕಾಶನ, ಧಾರವಾಡ.
- ನ್ಯಾಷನಲ್ ಇನ್ಫರ್ಮೇಶನ್ ಸೆಂಟರ್, ಎ ವಿಂಗ್, ಶಾಸ್ತ್ರಿ ಭವನ್, ಡಾ. ರಾಜೇಂದ್ರಪ್ರಸಾದ್ ರೋಡ್, ನ್ಯೂಡೆಲ್ಲಿ.

